

ಹರಿಯೇ ಎನಗಾರುಗತಿಯೋ ನೀನಲ್ಲದೆ ॥ ಪ ॥

ಹಿಂದಿನಾಪತ್ತು ಮರೆತೆ ಇಂದು ಮಾಯದಿ ಬೆರೆತೆ
ಒಂದುಗೂಡಿದವು ಎಲ್ಲ ಆಗ ಮುಂದಿನರುಹಿಲ್ಲ ॥ ೧ ॥

ಹಗಲು ಅಶನದ ಕೃತ್ಯ ಇರುಳು ನಿದ್ರೆಯ ಮಬ್ಬು
ವಿಗಡ ಕಾಮನ ತಡೆ ತಗಲು ಬಿತ್ತೋ ರಂಗಾ ॥ ೨ ॥

ಅತ್ತಿತ್ತೆ ಸುತ್ತುವನಕ ಹೊತ್ತು ಹೋಯಿತು ಯಮನ
ಮುತ್ತಿಗೆ ಬಿದ್ದಾಗ್ಗೆ ಮತ್ತಾರಿಲ್ಲೋ ಸ್ವಾಮಿ ॥ ೩ ॥

ಅಜ್ಞಾನೆಂಬ ಅಹಿ ಕಚ್ಚಿ ಯಜ್ಞೇಶ ನಿನ್ನಂಘ್ರಿ
ಸಂಜ್ಞಾನವಿಲ್ಲದೆ ದುಃಖ ಮಗ್ನನಾದೆನಲ್ಲೋ ॥ ೪ ॥

ಶ್ರೀ ಪ್ರಸನ್ವೇಂಕಟೇಶಾ ತಾಪತ್ರಯ ವಿನಾಶಾ
ನೀ ಪಾಲಿಸಯ್ಯ ವಿಶ್ವ ವ್ಯಾಪಕಸ್ವಾಮಿ ॥ ೫ ॥

—ಶ್ರೀ ಪ್ರಸನ್ನವೆಂಕಟದಾಸರು

ಸಂದರ್ಶಿಸಿ ಆನಂದಿಸಿ

# ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸಮಂಗಾಪುರ.



# ವಾರ್ಷಿಕ ಬ್ರಹ್ಮೋತ್ಸವ

**22-2-92 ರಿಂದ 31-2-92**

**ಕಾರ್ಯಕ್ರಮ ವಿವರ**

| ದಿನಾಂಕ | ವಾರ | ಬೆಳಿಗ್ಗೆ | ರಾತ್ರಿ |
|---|---|---|---|
| 22-2-92 | ಶನಿವಾರ | | ಅಂಕುರಾರ್ಪಣೆ |
| 23-2-92 | ಭಾನುವಾರ | ಧ್ವಜಾರೋಹಣ | ದೊಡ್ಡ ಶೇಷವಾಹನ |
| 24-2-92 | ಸೋಮವಾರ | ಚಿಕ್ಕ ಶೇಷವಾಹನ | ಹಂಸವಾಹನ |
| 25-2-92 | ಮಂಗಳವಾರ | ಸಿಂಹವಾಹನ | ಮುತ್ತಿನ ಚಪ್ಪರವಾಹನ |
| 26-2-92 | ಬುಧವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 27-2-92 | ಗುರುವಾರ | ಮೋಹಿನೀ ಅವತಾರ | ಗರುಡವಾಹನ |
| 28-2-92 | ಶುಕ್ರವಾರ | ಹನುಮದ್ವಾಹನ<br>ಸಂಜೆ - ವಸಂತೋತ್ಸವ | ಗಜವಾಹನ |
| 29-2-92 | ಶನಿವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 1 -3-92 | ಭಾನುವಾರ | ರಥೋತ್ಸವ | ಅಶ್ವವಾಹನ |
| 2 -3-92 | ಸೋಮವಾರ | ಚಕ್ರಸ್ನಾನ | ಧ್ವಜಾವರೋಹಣ |

ಸೂಚನೆ ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ ಶ್ರೀನಿವಾಸಮಂಗಾಪುರ, ತಿರುಪತಿಯಿಂದ 10 ಕಿ.ಮೀ ದೂರದಲ್ಲಿದೆ ಬಸ್ ಸೌಕರ್ಯ ಉಂಟು

ನೀವೂ ಬನ್ನಿ ತಿ ತಿ ದೇ ನಿಮ್ಮವರನ್ನೂ ಕರೆತನ್ನಿ



ಗೌರವ ಸಂಪಾದಕರು

ಶ್ರೀ ಎಂ ವಿ ಎಸ್ ಪ್ರಸಾದ್, ಐ ಎ ಎಸ್
ಕಾರ್ಯನಿರ್ವಹಣಾಧಿಕಾರಿ
ತಿ ತಿ ದೇ ತಿರುಪತಿ

ಸಂಪಾದಕ

ಕೆ ಸುಬ್ಬಾರಾವು, ಎಂ ಎ

ಉಪಸಂಪಾದಕ

ಬಿ ಎಸ್ ಶ್ರೀನಿವಾಸನ್ ಎಂ ಎ,

ಮುದ್ರಣ

ಎಂ ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ ತಿ ದೇ ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**



**ಸಂಪುಟ ೨೨] ಜನವರಿ ೧೯೯೨ [ಸಂಚಿಕೆ ೮**

# ವಿಷಯಸೂಚಿ



ಮುಖಚಿತ್ರ ಓಂಕಾರ ಛಾಯೆಯಲ್ಲಿ ದೇವಾಲಯವಿಮಾನ

ಹಿಂಬದಿಯಲ್ಲಿ ವೇದ ಶಾಸ್ತ್ರ ಸಮ್ಮೇಳನದ ಮುದ್ರೆ

ಒಳಗಡೆ ಸಂಕ್ರಾಂತಿ ಶೋಭೆ, ೧) ಚಿತ್ರ-ಜಗತೀಶ, ೨)ಮ.ಶೀ

# ಸಂಪಾದಕೀಯ

ವೇದಗಳು ಮಾನವ ಚರಿತ್ರೆಯಲ್ಲಿ ಪ್ರಪ್ರಥಮ ದಾಖಲೆಗಳಾಗಿವೆ ಎಂಬುದನ್ನು ಒಪ್ಪುತ್ತಲೇ ಅವುಗಳಲ್ಲಿ ಏನಿದೆ ಎಂಬ ತಾತ್ಪರ್ಯದೃಷ್ಟಿಯ ಪ್ರಶ್ನೆ ಹೊಸತೇನಲ್ಲ ಇನ್ನೊಂದು ಕೊನೆಯಲ್ಲಿ ಎಲ್ಲವೂ ವೇದಗಳಲ್ಲಿವೆ ಎಂಬ ಉಗ್ರವಾದವೂ ಉಂಟು ಸತ್ಯ ಎರಡೂ ಕೊನೆಗಳ ಮಧ್ಯದಲ್ಲಿ ಎಲ್ಲೋ ಇದೆ ಎಂಬುದು ಹಲವರ ಅಂಬೋಣ ಈ ಎಲ್ಲ ವಾದಾಂತಗಳ ನಡುವೆ ಸಿದ್ಧಾಂತವೇನೆಂಬುದು ಬರಿಯ ಕಣ್ಣಿಗೆ ಸುಲಭವಾಗಿ ಕಂಡು ಬರದಷ್ಟು ಸೂಕ್ಷ್ಮವಾಯಿತು, ಗೂಢವಾಯಿತು ಹೇಳಿಕೆ ಇದ್ದೇಯಿದೆಯಲ್ಲ – ಸಮುದ್ರಕ್ಕೇ ಹೋದರೂ ಅವರವರು ಕೊಂಡೊಯ್ದು ಪಾತ್ರೆಗಳು ಹಿಡಿಯುವಷ್ಟೇ ನೀರನ್ನು ತರಲು ಸಾಧ್ಯ – ಎನ್ನುತ್ತ ಒಂದುಕಡೆ ಸನಾತನ ಪರಂಪರಾಸಕ್ತರು ತಮ್ಮ ವಾದವನ್ನು ಮುಂದುವರಿಸುತ್ತಲೇ, ಭಾಷೆ ಯಿಂದ, ಬಳಕೆಯಿಂದ, ದೂರವಾದ ಶ್ರೀಸಾಮಾನ್ಯನಿಗೆ ಇತರ ರಂಗಗಳಲ್ಲಿನ ತುರ್ತುಗಳು ಹೆಚ್ಚಾಗಿ ವೇದಗಳ ತಂಟೆಗೆ ಹೋಗುವ ವಿಷಯವನ್ನೇ ಬಿಟ್ಟು ಭಾವನಾತ್ಮಕವಾಗಿ, ಬೌದ್ಧಿಕವಾಗಿ, ಬರಡಾದ ನಷ್ಟ ಸರ್ವತ್ರ ಏಕರೂಪವಾಯಿತೆಂದು ಬಿಡಿಸಿ ಲೆಕ್ಕ ಹಾಕಬೇಕಿಲ್ಲ

ಆಧುನಿಕ ಪಾಶ್ಚಾತ್ಯ ಯಾಂತ್ರೀಕೃತ ನಾಗರಿಕತೆಯ ಪ್ರಭಾವದಲ್ಲಿ ಸಮಕಾಲೀನ ಸಮಾಜಕ್ಕೆ ಹಿಂದೆಂದೂ ಇಲ್ಲದಷ್ಟು ಏಳ್ಗೆಯ ಸಾಧನಗಳು ದೊರೆತಿವೆಯೆಂಬುದು ಸ್ಪಷ್ಟವೇ ಇದೆ ಸುಖ ಸಾಧನಗಳು, ಸುಖಜೀವನ ಮಾರ್ಗಗಳು ದೊರೆತಿವೆ – 'ಕಂಡುಕೊಳ್ಳಲಾಗಿದೆ' ಎಂಬುದು ನಿಜವೇ ಆದರೂ, ಅವೆಲ್ಲದರ ಒಟ್ಟು ಮೊತ್ತವೂ ಇಹಜೀವನವನ್ನು ಪರಿಪೂರ್ಣ ಸುಖಮಯವನ್ನಾಗಿ ಮಾಡಲು (ನಂತರದ ಜೀವನದ ಮಾತು – ಆಳ – ಅಗಲ – ಎತ್ತರಗಳು ಬೇರೆಯಾದರೂ ಸಹ) ಸೋತಿವೆ ಎಂಬುದೂ ನಿಜವೇ ಆದರೆ ಈ ಪರಿಕರಗಳನ್ನು ಚೆನ್ನಾಗಿ ಬಳಸುವುದರ ಮೂಲಕ ಹೆಚ್ಚು ಹೆಚ್ಚಿನ ಅರ್ಥವಂತಿಕೆಯನ್ನು ಮನುಷ್ಯ ಜೀವನ ಪಡೆಯಬಲ್ಲ ಸಾಮರ್ಥ್ಯವಿದೆ ಇವುಗಳಲ್ಲಿ ಎಂಬುದು ಗಮನಾರ್ಹ ಅಂಶ ಇಂತಲ್ಲಿ ವಿಚಾರ ವಿನಿಮಯ, ಚರ್ಚೆ, ವಿದ್ವದ್ಗೋಷ್ಠಿಗಳ ನೆರವಿನಿಂದ ಅರಿವಿನ ದಿಗಂತಗಳನ್ನು ಹೆಚ್ಚಿಸಿಕೊಂಡು ಮುಂದುವರೆಯಲು ಸಾಧ್ಯವಿದೆ

ಹಿಂದಿನ ಹೆಜ್ಜೆಯ ಬಗ್ಗೆ ಸರಿಯಾಗಿ ತಿಳಿಯದವ ಮುಂದಿನ ಹೆಜ್ಜೆಯನ್ನಿಡಲು ಕತ್ತಲಲ್ಲಿ ತಡಕಾಡುವುದು ಸಹಜವೇ ಆಗಿದೆ ಇಂತಲ್ಲಿ ಒಂದು ಜನಾಂಗ ತನ್ನ ಇತಿಹಾಸವನ್ನು ಅರಿತಲ್ಲದೆ ಭವಿಷ್ಯವನ್ನು ರೂಪಿಸಿಕೊಳ್ಳಲಾರದು ' ಪರಂಪರೆಯ ಪರಿಚಯವಿಲ್ಲದ ಮಾನವ ಜೀವನಕ್ಕೆ ಗೊತ್ತು ಗುರಿಗಳಿರದು ಗಾಳಿಯಲ್ಲಿ ಅಲೆವ ಎಲೆಯಂತೆ ದಿಕ್ಕು ದೆಸೆಯಿಲ್ಲದ ಪಯಣವಾಗುತ್ತದೆ ಹಾಗಾಗಿಯೇ ಪ್ರತಿಯೊಬ್ಬರೂ ಇತಿಹಾಸವನ್ನರಿತು, ಸಂಸ್ಕೃತಿಯನ್ನರಿತು, ಅದನ್ನು ರಕ್ತಗತ, ಆತ್ಮಗತವಾಗಿಸಿಕೊಂಡು ಮುಂದುವರೆಯಬೇಕು ಆಗಲೇ ಗುರಿ ಸ್ಪಷ್ಟ ಹಾಗಾಗಿಯೇ ನಮ್ಮದಾದ ವಾರಸಿಕೆಯ ವೇದಗಳನ್ನು ತಿಳಿಯಬೇಕಾದ ಅಗತ್ಯ

ಆದರೆ ಈ ಇತಿಹಾಸ, ಸಂಸ್ಕೃತಿ, ಎಲ್ಲ ಸಂಸ್ಕೃತಮಯವಾಗಿ, ಅದೂ ಇಂದಿನ ಬಳಕೆಯ ರೀತಿಗಿಂತ ಬಹು ಬೇರೆಯಾಗಿ ಕಡಲೆಯಂತೆ, ಕಬ್ಬಿಣವಲ್ಲದಿದ್ದರೂ – ಆಗುತ್ತಿದೆಯಲ್ಲ ಎಂದು ಮೂಗೆಳೆಯುವವರೂ ಇಲ್ಲದಿಲ್ಲ ಯಾವುದೇ ವಿಷಯವನ್ನು ತಿಳಿಯಲೂ ಪ್ರಯತ್ನ ಪಡಬೇಕು, ತರಬೇತಿ ಪಡೆಯಬೇಕು ಎಂಬುದು ಮಗುವನ್ನು ಗಮನಿಸಿದವರೂ ತಿಳಿಯಬಲ್ಲರು ಹಾಗೆಯೇ ಇತಿಹಾಸ ಸಂಸ್ಕೃತಿಗಳೂ ಅವು ಲ್ಯಾಟಿನ್ ಸಂಸ್ಕೃತಗಳಲ್ಲಿ ಅಲ್ಲದೆ ಇಂದಿನ ಮಾತೃಭಾಷೆಯಲ್ಲೇ ಇದ್ದಾಗಲೂ ಸಹ ಒಂದು ಶಿಸ್ತು, ಒಂದು ತರಬೇತಿ, ಒಂದು ತೀವ್ರ ಪ್ರಯತ್ನ, ಒಂದು ಆಸಕ್ತಿ ಇರಲೇಬೇಕು ಇಲ್ಲದಲ್ಲಿ ಎತ್ತುಗಾಣವ ಸುತ್ತಿದಂತೆ ಎಂಬುದು ಸ್ಪಷ್ಟ

ತಿರುಮಲೆ ತಿರುಪತಿ ದೇವಸ್ಥಾನಗಳ ಪತಿಯಿಂದ ವೇದಶಾಸ್ತ್ರಗಳ ರಾಷ್ಟ್ರೀಯ ಸಮ್ಮೇಳನ ಈ ತಿಂಗಳು ಹಾಗೂ ಮುಂದಿನ ತಿಂಗಳುಗಳಲ್ಲಿ ಆರು ದಿನಗಳ ಕಾಲ ನಡೆಯುವಂತೆ ಆಯೋಜನೆಯಾಗಿದೆ ವೇದಾಧ್ಯಯನದಲ್ಲಿರುವ ಎಡರುತೊಡರುಗಳು, ಪರಿಹಾರೋಪಾಯಗಳು ಪ್ರಸಾರ, ಪ್ರಚಾರ, ಪರಿರಕ್ಷಣಾ ಸೂತ್ರಗಳು, ಕಾರ್ಯಕ್ರಮಯೋಜನೆಗಳು – ಇವುಗಳನ್ನೆಲ್ಲ ಕಂಡುಕೊಳ್ಳಲು ವಿವಿಧ ಪೀಠಾಧಿಪತಿಗಳು, ಪ್ರಾಚಾರ್ಯಮನ್ಯರು, ಮಹಾಮಹೋಪಾಧ್ಯಾಯರು ವಿದ್ವಾಂಸ ಪ್ರಮುಖರು ಭಾಗವಹಿಸಿ ವಿಚಾರ ವಿನಿಮಯ ಮಾಡಿಕೊಳ್ಳಲಿದ್ದಾರೆ ವಿಜ್ಞಾನದ ಕುದುರೆಯನ್ನೇರಿದ ವೇದ ಢಮರುವಿನ ಮೂಲಕ ಭಾರತೀಯ ಸಂಸ್ಕೃತಿಯ ಸಂದೇಶ ಜಗತ್ತಿಗೆಲ್ಲ ಎಚ್ಚರಿಕೆ ನೀಡಿ ಸೌಹಾರ್ದ ಶಾಂತಿಗಳನ್ನು ಹರಡುವಲ್ಲಿ ಸಮ್ಮೇಳನ ಸಫಲವಾಗಲಿ ಎಂದು ಆಶಿಸುವುದರೊಡನೆಯೇ ಇಂತಹ, ಒಂದು ಸಂಘಟನೆಯಿಂದಾಗಿ ವೇದಗಳ ಬಗೆಗಿನ ಆಸಕ್ತಿ ನಮ್ಮಲ್ಲಿಯೇ ತೀವ್ರವಾಗಿ ವೇದಗಳ ಪರಿಚಯ, ಅಧ್ಯಯನಗಳ ಬಗ್ಗೆ ಮನ ಮೂಡುವಂತಾಗಲಿ ಎಂದು ವೇದ ಪುರುಷನಾದ ವೆಂಕಟೇಶ್ವರಸ್ವಾಮಿಯನ್ನು ಬೇಡುವ

ಇತಿ ಶಂ



# ಆಂಡಾಳ್ ತಿರುಪ್ಪಾವೈ

ಪ್ರೊ ಎಂ ವಿ ಜಂಬುನಾಥನ್

ಶ್ರೀ ವೈಷ್ಣವ ಆಳ್ವಾರುಗಳಲ್ಲಿ ಆಂಡಾಳ್ ಎಂಬ — ಗೋದಾದೇವಿಯೂ ಒಬ್ಬಾಕೆ "ತಿರುಪ್ಪಾವೈ" ಎಂಬ 30 ಪಾಶುರಗಳ ತಮಿಳು ಪ್ರಬಂಧವನ್ನು ಈಕೆ ರಚಿಸಿರುವಳು ಧನುರ್ಮಾಸದಲ್ಲಿ ತಿರುಪ್ಪಾವೈ ಬಗ್ಗೆ ಪಠನ, ಪ್ರವಚನ, ಉಪನ್ಯಾಸ ನಡೆಸುವುದು ತಮಿಳರ ವಿಶೇಷವಾಗಿ ಶ್ರೀ ವೈಷ್ಣವರ ಸಂಪ್ರದಾಯ

"ಮಾಸಾನಾಂ ಮಾ ರ್ಗ ಶೀ ರ್ಷೋ ಹಂ, ಋತೂನಾಂ ಕುಸುಮಾಕರಃ" —ಅಂದರೆ ಮಾಸಗಳಲ್ಲಿ ನಾನು ಮಾರ್ಗಶಿರ ಮಾಸ, ಋತುಗಳಲ್ಲಿ ನಾನು ವಸಂತ ಋತು – ಎಂಬುದಾಗಿ ಶ್ರೀಕೃಷ್ಣ ಪರಮಾತ್ಮನು ಗೀತೆಯಲ್ಲಿ ಹೇಳಿದ್ದಾನೆ ಮಾಸಗಳಲ್ಲಿ ಮಾರ್ಗಶೀರ್ಷ ಮಾಸವೇ ಶ್ರೇಷ್ಠವಾದುದು ಎಂಬುದು ಇದರಿಂದ ಗೊತ್ತಾಗುತ್ತದೆ

ಮಾನವರಾದ ನಮಗೆ ಒಂದು ವರ್ಷ — ಎಂಬುದು ದೇವಮಾನದಲ್ಲಿ ಒಂದು ದಿನವಾಗುವುದು ಉತ್ತರಾಯಣದ ಆರು ತಿಂಗಳು ದೇವರುಗಳಿಗೆ ಹಗಲೆಂತಲೂ, ದಕ್ಷಿಣಾಯಣದ ಆರು ತಿಂಗಳು ದೇವರುಗಳಿಗೆ ರಾತ್ರಿ ಎಂತಲೂ ಹೇಳುವರು ದೇವ ಮಾನವ ಈ ಲೆಕ್ಕದ ಪ್ರಕಾರ ಧನುರ್ಮಾಸವು ದೇವರುಗಳಿಗೆ ಉಷಃಕಾಲವಾಗುವುದು ಸೂರ್ಯೋದಯದ ಮುನ್ನಿನ ಒಂದು ಮುಹೂರ್ತಕ್ಕೆ ಬ್ರಾಹ್ಮೀ ಮುಹೂರ್ತ ಎಂದು ಹೆಸರು ಆ ಕಾಲವು ಸತ್ಕಾರ್ಯಗಳಿಗೆ ಬಹಳ ಪ್ರಶಸ್ತವಾದದ್ದು ಎಂಬುದಾಗಿ ನಮ್ಮ ಶಾಸ್ತ್ರಗಳು ಸಾರುತ್ತಿವೆ ಅಂತೆಯೇ, ದೇವ ಮಾನದ ಬ್ರಾಹ್ಮೀ ಮುಹೂರ್ತವಾದ ಧನುರ್ಮಾಸ ಅತಿ ಪ್ರಶಸ್ತವಾದ ಪರ್ವಕಾಲ ಎಂದು ಹೇಳಬೇಕಾಗಿಲ್ಲ ಈ ತಿಂಗಳಲ್ಲಿ ಭಕ್ತರು ಉಷಃಕಾಲದಲ್ಲಿ ಎದ್ದು, ಭಕ್ತಿ ಶ್ರದ್ಧೆಯಿಂದ ಭಗವಂತನನ್ನು ವಿಶೇಷವಾಗಿ ಪೂಜಿಸುವುದು ರೂಢಿ ಊರ ಜನರು ನಸುಕಿನಲ್ಲೇ ದೇವಮಂದಿರದ ಮುಂದೆ ಒಟ್ಟು ನೇರಿ, ಪುರ ಪ್ರದಕ್ಷಿಣೆ ಮಾಡುತ್ತ, ದೇವರ ನಾಮಸಂಕೀರ್ತನೆ ಮಾಡಿ ಸುಪ್ರಭಾತ ಗೀತೆ ಕೆಲವೆಡೆಗಳಲ್ಲಿ ವಿಶೇಷವಾಗಿ ತಮಿಳುನಾಡಿನಲ್ಲಿ – ಆಚರಣೆಯಲ್ಲಿರುವುದು

ಅವಿವಾಹಿತ ಕನ್ನೆಯರು ತಮಗೆ ತಕ್ಕ ಸದ್ಗುಣಿಯಾದ ಹಾಗೂ ಸದ್ಭಕ್ತರಾದ ಪತಿ ದೊರೆಯಬೇಕೆಂದು ಗೌರಿಯನ್ನು ಉದ್ದೇಶಿಸಿ ಕಾತ್ಯಾಯನೀ ವ್ರತವನ್ನು ಆಚರಿಸುವರು (ಉಮಾಕಾತ್ಯಾಯನೀ ಗೌರೀ — ಎಂಬುದು ಅಮರ ಕೋಶ) ಈ ವ್ರತವನ್ನು "ಪಾವೈ ನೋನ್ಪು" ಎನ್ನುವರು ತಮಿಳಿನಲ್ಲಿ "ಪಾವೈ" ಎಂದರೆ ಕನ್ನೆ, "ನೋನ್ಪು" ಎಂದರೆ



ನೋಂಪಿ ಅಥವಾ ವ್ರತ ಪುರಾಣಗಳಲ್ಲಿ ಉಕ್ತವಾಗಿರುವಂತೆ, ಸೀತೆ, ರುಕ್ಮಿಣಿ ಮುಂತಾದವರು ತಮ್ಮ ವಿವಾಹದ ಮುನ್ನ ಗೌರೀ ಪೂಜೆಯನ್ನು ಮಾಡಿದರಂತೆ ಇದಕ್ಕನುಗುಣವಾಗಿ ಈಗಲೂ ಮದುವೆಯ ಮುನ್ನ ಕನ್ನೆಯರು ಗೌರೀ ಪೂಜೆಯನ್ನು ಮಾಡುವ ರೂಢಿ ಇದೆ ಊರಿನ ಕನ್ನೆಯರೆಲ್ಲರೂ ಮುಂಜಾನೆ ಎದ್ದು ಒಟ್ಟುಗೂಡಿ, ಹೊಳೆಗೆ ಹೋಗಿ ಮಿಂದು ಬರುವರು ಬಳಿಕ ಭಗವಂತನನ್ನು ನುತಿಸಿ, ಮನದೊಳು ಧ್ಯಾನಿಸಿ ಪೂಜೆಗೈವರು

ಹಿಂದೆ ನಂದಗೋಕುಲದಲ್ಲಿನ ಗೋಪಕನ್ನೆಯರು ಕಾತ್ಯಾಯನೀ ವ್ರತವನ್ನು ಆಚರಿಸಿದರಂತೆ ಈ ನೋಂಪಿಯನ್ನು ಕುರಿತು ಗೋದಾದೇವಿಯು ತನ್ನ ತಿರುಪ್ಪಾವೈ ಪ್ರಬಂಧದಲ್ಲಿ ರಸವತ್ತಾಗಿ ವರ್ಣಿಸಿರುವಳು

ಶ್ರೀವಿಲ್ಲಿಪ್ಪುತ್ತೂರ್ ಎಂಬ ಕ್ಷೇತ್ರದಲ್ಲಿ ವಟಪತ್ರಶಾಯಿ ಎಂಬ ವಿಷ್ಣುದೇವಾಲಯ ಇರುವುದು ಆ ಊರಿನಲ್ಲಿ ಪೆರಿಯಾಳ್ವಾರ್ ಎಂಬ ವಿಷ್ಣುಚಿತ್ತರು ಭಗವದ್ಭಕ್ತಿಯಲ್ಲಿ ಮುಳುಗಿದವರಾಗಿದ್ದರು ಅವರು ಹಿರಿಯ ಶ್ರೀ ವೈಷ್ಣವ ಆಳ್ವಾರುಗಳಲ್ಲಿ ಒಬ್ಬರು ಅವರು ಒಂದು ನಂದನವನವನ್ನು ಬೆಳೆಯಿಸಿ, ಹೂಗಳನ್ನು ಕೊಯ್ದು ಮಲರ್ಮಾಲೆಗಳನ್ನು ಕಟ್ಟಿ ಪ್ರತಿದಿನ ದೇವರಿಗೆ ತೊಡಿಸುತ್ತಿದ್ದರು ಅವರ ಸಾಕುಮಗಳಾದ ಆಂಡಾಳ್ ಸಹಜವಾಗಿಯೇ ಅನನ್ಯ ವಿಷ್ಣು ಭಕ್ತಿಯನ್ನು ತಳೆದಿದ್ದಳು ಶಿವ ಶರಣೆಯಾದ ಅಕ್ಕಮಹಾದೇವಿ ಮಲ್ಲಿಕಾರ್ಜುನನ್ನೇ ತನ್ನ ಪತಿ ಎಂದು ಭಾವಿಸಿದಂತೆ, ಮೀರಾಬಾಯಿ ಶ್ರೀಕೃಷ್ಣನನ್ನೇ ತನ್ನ ಪತಿ ಎಂದು ಪರಿಗಣಿಸಿದಂತೆ, ಗೋದಾದೇವಿಯು ಶ್ರೀ ರಂಗನಾಥನೇ ತನ್ನ ಪತಿಯಾಗತಕ್ಕವನು ಎಂದು ಮನದೊಳು ಸಂಕಲ್ಪಮಾಡಿಕೊಂಡಳು ತಾನು ಯಾವ ಮಾನವನನ್ನೂ ಮದುವೆಯಾಗಲೊಲ್ಲೆ ಎಂದು ಹೇಳುತ್ತ, ಶ್ರೀರಂಗನಾಥನನ್ನೇ ಮದುವೆಯಾಗುವೆನು ಎಂದು ಹಠಹಿಡಿದಳು ತನ್ನ ಸಾಕು ತಂದೆಯಾದ ವಿಷ್ಣುಚಿತ್ತರು ಪ್ರತಿದಿನವೂ ದೇವರಿಗೆಂದು ಮೀಸಲಾಗಿಟ್ಟಿದ್ದ ಹೂಮಾಲೆಯನ್ನು, ಆಂಡಾಳ್ ತಾನು ಧರಿಸಿಕೊಂಡು, ಅದು ತನ್ನ ಪತಿಯಾದ ವಿಷ್ಣುವಿಗೆ ಒಪ್ಪುವಂತೆ ಇದೆಯೇ ಎಂದು ಕನ್ನಡಿಯ ಮುಂದೆ ನಿಂತು ನೋಡುತ್ತಿರುವಳಂತೆ ಇದು ಪೆರಿಯಾಳ್ವಾರಿಗೆ ತಿಳಿದಿರಲಿಲ್ಲ ಒಂದು ದಿನ ಅವರು ದೇವರಿಗೆಂದು ಇಟ್ಟಿದ್ದ ಹಾರವನ್ನು ಧರಿಸಿಕೊಂಡು ನಿಂತಿದ್ದ ಮಗಳನ್ನು ಅಕಸ್ಮಾತ್ತಾಗಿ ಕಂಡು ಪೆರಿಯಾಳ್ವಾರ್ ಬೆಚ್ಚಿಬಿದ್ದು ವ್ಯಥೆಪಟ್ಟರು ದೇವರ ವಿಷಯದಲ್ಲಿ ದೊಡ್ಡ ಅಪಚಾರವಾಯಿತೆಂದು ಮನನೊಂದರು ಆ ಮಲರ್ಮಾಲೆಯನ್ನು ಬಿಸಾಡಿದರು ಅಂದು ದೇವರಿಗೆ ಹಾರವನ್ನೇ ಸಮರ್ಪಿಸಲಿಲ್ಲ ಅಂದು ರಾತ್ರಿ ಪೆರಿಯಾಳ್ವಾರರ ಕನಸಿನಲ್ಲಿ ಭಗವಂತನು ಕಾಣಿಸಿಕೊಂಡು, "ಆಂಡಾಳ್ ತಾನು ಧರಿಸಿಕೊಂಡು ತರುವಾಯ ಕೊಟ್ಟ ಹಾರವೇ ತನಗೆ ಪ್ರಿಯಕರವಾದುದು" ಎಂದು ಹೇಳಿದನಂತೆ ಅದು ಮೊದಲುಗೊಂಡು ಆಂಡಾಳ್ ಧರಿಸಿದ ಬಳಿಕವೇ ಹೂಮಾಲೆಯನ್ನು ದೇವರಿಗೆ ಪೆರಿಯಾಳ್ವಾರ್ ತೊಡಿಸುತ್ತಿದ್ದರಂತೆ ಇದರಿಂದಾಗಿ, ಆಂಡಾಳ್‌ಗೆ - "ಶೂಡಿಕ್ಕೊಡುತ್ತನಾಚ್ಚಿಯಾರ್" - ಅಂದರೆ, ತಾನು ಮುಡಿದು ಕೊಟ್ಟ ದೇವಿ - ಎಂಬ ಹೆಸರಾಯಿತು

ಆಂಡಾಳ್ ವಿರಚಿತ ತಿರುಪ್ಪಾವೈ ಪ್ರಬಂಧವು ದಾರ್ಶನಿಕರ ದೃಷ್ಟಿಯಲ್ಲಿ ಉತ್ಕೃಷ್ಟವಾದ ಗ್ರಂಥ ಅಲ್ಲದೆ ಸಾಹಿತ್ಯದ ದೃಷ್ಟಿಯಲ್ಲೂ ಇದು ಉತ್ತಮ ಕೃತಿಯಾಗಿದೆ. ಶ್ರೀ ವೈಷ್ಣವರಿಗೆ ಇದು ಅಚ್ಚುಮೆಚ್ಚಿನ ಗ್ರಂಥ ಧನುರ್ಮಾಸದಲ್ಲಿ ವಿಶೇಷ ಉತ್ಸುಕತೆ, ಸಂಭ್ರಮಗಳಿಂದ ಎಲ್ಲೆಲ್ಲೂ ಇದರ ಪಠನ, ವ್ಯಾಖ್ಯಾನ ನಡೆಯುವುದಲ್ಲದೆ ವಿಷ್ಣುದೇವಾಲಯಗಳಲ್ಲಿ ಪ್ರತಿನಿತ್ಯವೂ ತಿರುಪ್ಪಾವೈ ಸ್ತೋತ್ರ ಪಾಠ ನಡೆಯುತ್ತಿರುವುದು ಗೋಕುಲದ ಗೋಪಕನ್ನೆಯರು ಕಾತ್ಯಾಯನೀ ವ್ರತವನ್ನು ಆಚರಿಸಿದ ರೀತಿಯನ್ನು ಇದರಲ್ಲಿ ವರ್ಣಿಸಲಾಗಿದೆ ಮಾತಿನ ನಯ, ಪದಲಾಲಿತ್ಯ, ಭಾವಗಳ ಘನತೆ, ಸಹಜತೆ, ಭಕ್ತಿ, ಮಾನವ ಕಲ್ಯಾಣದ ವಿಶಾಲ ಮನೋಭಾವ - ಇವೆಲ್ಲವನ್ನೂ ತಿರುಪ್ಪಾವೈ ಪ್ರಬಂಧದಲ್ಲಿ ಕಾಣಬಹುದು ಇದನ್ನೆಲ್ಲ ಗೋಪಿಯರ ಮಾತಿನಲ್ಲೇ ಹೇಳೋಣ

"ಕ್ಷೀರಸಾಗರ ಶಯನನಾದ ಭಗವಂತನ ಪಾದಗಳಿಗೆ ಎರಗಿ ನುತಿಸುತ್ತೇವೆ ನಾವು ಆಚರಿಸುವ ಈ ವ್ರತದ ದಿನಗಳಲ್ಲಿ ನಾವು ತುಪ್ಪವನ್ನೂ ಹಾಲನ್ನೂ ಸೇವಿಸುವುದಿಲ್ಲ ಮುಂಜಾನೆ ಎದ್ದು

ತೊರೆಯಲ್ಲಿ ಮಿಂದು ಬರುವೆವು ಕಣ್ಣಿಗೆ ಕಾಡಿಗೆ ಹಚ್ಚಿಕೊಳ್ಳೆವು ತಲೆಗೆ ಹೂವನ್ನು ಮುಡಿದುಕೊಳ್ಳೆವು, ಮಾಡಬಾರದ ಯಾವ ಕೆಲಸವನ್ನೂ ಮಾಡೆವು ಚಾಡಿಮಾತುಗಳನ್ನು ಸುತರಾಂ ಆಡೆವು ದಾನಧರ್ಮವನನು ಮಾಡುವೆವು ಭಿಕ್ಷೆಯನ್ನು ನೀಡುವೆವು ಎಲ್ಲವನ್ನೂ ಭಗವಂತನಿಗೇ ಅರ್ಪಿಸುವೆವು ಮುಕ್ತಿಯ ಸಾಧನೆಯನ್ನು ಶ್ರದ್ಧೆಯಿಂದ ಮನದೊಳು ನೆನೆಸಿ ಸಂತಸದಿಂದಿರುವೆವು

"ಅಂದು ಈ ಲೋಕವನ್ನಳೆದ ನಿನ್ನ ಅಡಿಗಳಿಗೆ ಜಯವಾಗಲಿ' ದಕ್ಷಿಣದ ಲಂಕೆಯನ್ನು ಗೆದ್ದ ನಿನ್ನ ತೋಳ ಬಲಕ್ಕೆ ಜಯವಾಗಲಿ' ಶಕಟಾಸುರನ್ನು ಸಾಯುವಂತೆ ಕಾಲಿಂದ ಒದ್ದವನೇ, ನಿನ್ನ ಖ್ಯಾತಿಗೆ ಜಯವಾಗಲಿ'-ಕರುವನ್ನು ಕವಣೆಯಂತೆ ಒಗೆದ ಗೋಪಾಲ, ನಿನ್ನ ಪಾದಕ್ಕೆ ಜಯವಾಗಲಿ' ಗುಡ್ಡವನ್ನು ಕೊಡೆಯಂತೆ ಎತ್ತಿ ಹಿಡಿದ ಗೋವರ್ಧನ ಧಾರೀ' ನಿನ್ನ ಗುಣಕ್ಕೆ ಜಯವಾಗಲಿ' ನಮ್ಮ ಸೇವ್ಯ ಯೋಗ್ಯವಾದ ದೇವನೆ, ಇಂದು ನಾವು ನಿನ್ನಲ್ಲಿಗೆ ಬಂದಿದ್ದೇವೆ' ನಮ್ಮ ಮೇಲೆ ಕರುಣೆ ತೋರು'

"ನಿನ್ನ ವೀರ ಪರಾಕ್ರಮವನ್ನು ಪಾಡಿ ಕೊಂಡಾಡಿ, ದುಃಖವನ್ನು ನೀಗಿ ಹರ್ಷಿಸುವೆವು ನಾವು ಬೇಡಿದ ಪುರುಷಾರ್ಥಗಳನ್ನು ನೀನು ದಯಪಾಲಿಸುವೆಯಾದರೆ ನಾವು ಮೋಕ್ಷವನ್ನು ಪಡೆಯುವೆವು ಗೊಲ್ಲರ ಕುಲದಲ್ಲಿ ನೀನು ಹುಟ್ಟಿರುವುದು ನಮ್ಮ ಭಾಗ್ಯವೇ ಸರಿ ಏನೂ ಅರಿಯದ ಹಸುಳೆಗಳು ನಾವು ಪ್ರೀತಿಯಿಂದಲೂ, ಸಲಿಗೆಯಿಂದಲೂ ನಿನ್ನನ್ನು ಸಣ್ಣ ಹೆಸರಿನಿಂದ ಕರೆಯುತ್ತಿದ್ದೆವು ಅದಕ್ಕಾಗಿ ನೀನು ಸಿಟ್ಟುಗೊಳ್ಳಬೇಡ, ನಮಗೆ ಪುರುಷಾರ್ಥಗಳನ್ನು ನೀನು ಅನುಗ್ರಹಿಸು

"ಓರ್ವಳ ಮಗನಾಗಿ ಹುಟ್ಟಿ, ಮತ್ತೋರ್ವಳ ಮಗನಾಗಿ ಬೆಳೆದ ಗೋಪಾಲ' ಲೋಕವನ್ನೆಲ್ಲ ತನ್ನ ಪಾದದಿಂದ ಅಳೆದ ತ್ರಿವಿಕ್ರರೂಪನಾದ-ಭಗವಂತನೆ, ನಿನ್ನ ನಾಮಸ್ಮರಣೆ ಮಾಡಿ ಸ್ತುತಿಗೈದು, ಕಾತ್ಯಾಯನಿಗೆ ಮಜ್ಜನ ಮಾಡಿಸಿದರೆ ಯಾವವಿಧವಾದ ಕೆಡಕೂ ಇಲ್ಲದೆ, ತಿಂಗಳಿಗೆ ಮೂರು ಬಾರಿ ಮಳೆಗರೆದು, ದವಸಧಾನ್ಯಗಳು ಸಮೃದ್ಧಿಯಾಗಿ ಬೆಳೆದು, ಗೋಸಂಪತ್ತು ಹೆಚ್ಚಿ, ದೇಶವೆಲ್ಲ ಸುಭಿಕ್ಷವಾಗಿ ಇರುವುದು ಕೂಡಾರೈವೆಲ್ಲುಂ ಶೀರ್ ಗೋವಿಂದ - ಅಂದರೆ, ನಮ್ಮೊದನೆ ಸೇರದೆ ಬೇರೆಯಾಗಿರುವ ವಿರೋಧಿಗಳನ್ನೆ ಗೆಲ್ಲುವ ಮಹಿಮೆವೆತ್ತ ಗೋವಿಂದ' ನಾವು ನಿನ್ನನ್ನೇ ಸ್ತುತಿಸುವೆವು ಜನ್ಮ ಜನ್ಮಕ್ಕೂ ನಿನ್ನ ಸೇವೆಯನ್ನೇ ಮಾಡುವೆವು'"

ಕೊನೆಯ ಫಲ ಶ್ರುತಿಯಲ್ಲಿ ಹೇಳಿರುವಂತೆ ಇಂಥ ಪವಿತ್ರವಾದ ತಿರುಪ್ಪಾವೈ ಪ್ರಬಂಧವನ್ನು ಪಠಿಸುವ ಭಕ್ತರು ಲಕ್ಷ್ಮೀ ಸಮೇತನಾದ ನಾರಾಯಣನ ಕೃಪೆಗೆ ಪಾತ್ರರಾಗಿ ನಿತ್ಯಸುಖವನ್ನು ಪಡೆಯುವರು

ತಿರುಪ್ಪಾವೈ ಅಲ್ಲದೆ, 143 ಪಾಶುರಗಳನ್ನೊಳಗೊಂಡ "ನಾಚ್ಚಿಯಾರ್ ತಿರುಮೊಳಿ " ಎಂಬ ಪ್ರಬಂಧವನ್ನೂ ಗೋದಾದೇವಿ ರಚಿಸಿರುವಳು ಇವೆರಡನ್ನೂ ಶ್ರೀ ವೈಷ್ಣವರ 'ನಾಲಾಯಿರ ಪ್ರಬಂಧಂ" - ನಾಲ್ಕು ಸಾವಿರ ಪ್ರಬಂಧ - ಎಂಬುದರೊಳಗೆ ಸೇರ್ಪಡೆಮಾಡಲಾಗಿದೆ

***





# ತಿ. ತಿ. ದೇವಸ್ಥಾನಗಳು, ತಿರುಪತಿ.
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### ಕನ್ನಡ

ಶ್ರೀನಿವಾಸನ ಹಾಡುಗಳು-ಭಾಗ-೨ (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) ೪-೫೦

ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) -ವಿ ಬಾದರಾಯಣ ಮೂರ್ತಿ ೧೨-೫೦

ಪುರಂದರೋಪನಿಷತ್ (ಪುರಂದರದಾಸರ ಏಳು ಕೃತಿ ವಿವರಣೆ) -ಬನ್ನಂಜೆ ಗೋವಿಂದಾಚಾರ್ಯ ೭-೦೦

ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) -ಸಂ ಕೆ ಅಪ್ಪಣ್ಣಾಚಾರ್ಯ ೩-೭೫

ಕರ್ನಾಟಕ ಹರಿದಾಸರು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) - ಸಂ ಕೆ ಅಪ್ಪಣ್ಣಾಚಾರ್ಯ ೨-೨೫

ಸ್ತೋತ್ರ ಕುಸುಮಮಾಲಾ -ಸಂ ವೆಂಕಟಾಚಲ ೩-೦೦

ಆಚಾರಗಳು ಆಡಂಬರಗಳು -ಕೆ ಚಂದ್ರಮೌಳಿ ೦-೪೦

ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) ೦ ೫೦

" " (ಕನ್ನಡ ಲಿಪಿಯಲ್ಲಿ) ೦.೧೨

### ಮಕ್ಕಳಿಗಾಗಿ

ಶ್ರೀಪಾದರಾಜರು -ಎಂ ಎಸ್ ಗುಂಡೂರಾವ್ ೦-೭೫

ಮಹಿಪತಿದಾಸರು -ಶಾನಭಾಗ ೦-೮೫

ಪ್ರಸನ್ನ ವೆಂಕಟದಾಸರು -ವಿ ಬಾದರಾಯಣಮೂರ್ತಿ ೦-೮೦

ಗೋಪಾಲದಾಸರು -ರುಕ್ಮಿಣಿಗಿರಿಮಾಜಿ ೦-೭೫

### ಹಿಂದಿ

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ -ಡಾ ಎಂ ಸಂಗಮೇಶಂ ೦-೨೦

ಶ್ರೀ ವೇಂಕಟೇಶ್ವರ ಸುಪ್ರಭಾತ್ (ಸಚಿತ್ರ) ೧೧-೦೦

ತೀರ್ಥರಾಜ ತಿರುಪತಿ -ಡಾ ಎಂ ಸಂಗಮೇಶಂ ೧-೫೦

### ಸಂಸ್ಕೃತ

ಶ್ರೀ ವೇಂಕಟೇಶ್ವರ ಸುಪ್ರಭಾತಂ ೦-೧೨

ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ ೦-೬೨

ಕಠೋಪನಿಷತ್ -ಡಾ ಕೆ ಸಿ ವರದಾಚಾರಿ ಹಾಗೂ ಡಾ ಡಿ ತಾತಾಚಾರ್ಯ ೧೫-೦೦

ಮಾರ್ಕಂಡೇಯ ಸಂಹಿತಾ ೧೮-೦೦

ತತ್ತ್ವಸಂಖ್ಯಾನಂ -ಆರ್ ರಾಮಮೂರ್ತಿ ಶರ್ಮಾ ೨-೦೦

ಬ್ರಹ್ಮಸೂತ್ರ ಭಾಷ್ಯ (ಭಾಗ-೧) -ಆರ್ ರಾಮಮೂರ್ತಿ ಶರ್ಮಾ ೩೦-೦೦

ಅಲಂಕಾರ ಸಂಗ್ರಹ ಸಂ-ಕೆ ಭಾಸ್ಕರರಾವ್ ೧೬-೦೦

ಸೀತಾರಾಮಾಂಜನೇಯಂ -ಡಾ ಡಿ ಅರ್ಕಸೋಮಯಾಜಿ ೫೦-೦೦

ಪ್ರಶ್ನೋಪನಿಷತ್ ೧೧-೦೦

ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ -ಸಂ-ಡಾ ಎಸ್ ಬಿ ರಘುನಾಥಾಚಾರ್ಯ ೨೫-೦೦

೧೦೦೦ ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ ೩೦ಶತಾಂಶ ರಿಯಾಯಿತಿಯೂ, ೫೦೦ ರೂಗಳಿಂದ ೧೦೦೦ ರೂ ವರೆಗೆ ೨೫ಶತಾಂಶ ರಿಯಾಯಿತಿಯೂ, ೧೦೦ ರೂ ಗಳಿಂದ ೫೦೦ ರೂ ವರೆಗೆ ೧೫ಶತಾಂಶ ರಿಯಾಯಿತಿಯೂ ಉಂಟು

ಅಂಚೆವೆಚ್ಚ ಪ್ರತ್ಯೇಕ

ಕೂಡಲೇ ಬರೆಯಿರಿ

ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,
ತಿ ತಿ ದೇ ತಿರುಪತಿ

# ಸೌರ್ಯೋಪಾಸನೆ

ಭಾರತೀಯ ಸಂಸ್ಕೃತ ವಾಙ್ಮಯದ ಸನಾತನ ಪರಂಪರೆಯಲ್ಲಿ ಭಗವಾನ್ ಭಾಸ್ಕರನ ಸ್ಥಾನವು ಅಪ್ರತಿಮವಾಗಿದೆ ಸಮಸ್ತ ವೇದ ಸ್ಮೃತಿ ಪುರಾಣ ರಾಮಾಯಣ, ಮಹಾಭಾರತಾದಿ ಗ್ರಂಥಗಳು ಭಗವಾನ್ ಸೂರ್ಯನ ಮಹಿಮೆಯಿಂದ ಪರಿಪ್ಲುತವಾಗಿವೆ ಭಾರತೀಯ ಸನಾತನ ಧರ್ಮವು ಭಗವಾನನ ಸವಿತೃಮಹಿಮೆ ಮತ್ತು ಪ್ರಕಾಶದಿಂದ ಅನುಪ್ರಣೀತ – ಸೂರ್ಯಮಹಿಮೆಯು ಅದ್ವಿತೀಯವೆನಿಸಿದೆ

ನಮ್ಮ ಉಪಾಸನಾ ಪದ್ಧತಿಯಲ್ಲಿ ಸೂರ್ಯೋಪಾಸನೆಗೆ ವಿಶಿಷ್ಟವಾದ ಸ್ಥಾನಮಾನ ಕಲ್ಪಿಸಿಕೊಟ್ಟಿದ್ದಾರೆ ಸೌರಮಂಡಲದಲ್ಲಿ ಸೂರ್ಯ ಚಂದ್ರಾದಿ ನವಗ್ರಹ ತ್ರಿಮೂರ್ತಿಮರುದ್ಗರಾ ಸಾಧ್ಯದೇವ ಸಪ್ತರ್ಷಿಗಳು ಮತ್ತು ಮೂವತ್ಮೂರು ಕೋಟಿ ದೇವತೆಗಳು ವಾಸವಾಗಿದ್ದಾರೆ

ಋಗ್ವೇದ ಶಾಕಲ ಸಂಹಿತೆಯಲ್ಲಿ ಸೂರ್ಯ ಆತ್ಮಾ ಜಗತಸ್ತು ಸ್ಥುಷಶ್ಚ ಎಂದು ಹೇಳಿ ಜಂಗಮ – ಸ್ಥಾವರ ಎಲ್ಲ ಪ್ರಾಣಿಗಳ ಆತ್ಮನು ಸೂರ್ಯನೇ ಆಗಿರುವನು ಸೂರ್ಯನಿಂದಲೇ ದಿಕ್ಕುಗಳು ಆಕಾಶ ದ್ಯುಲೋಕ ಭೂಲೋಕ ಸ್ವರ್ಗ ಮೋಕ್ಷದ ಪ್ರದೇಶ, ನರಕ ಮತ್ತು ರಸಾತಲ ಹಾಗೂ ಇತರ ಸಮಸ್ತ ಸ್ಥಾನಗಳನ್ನು ವಿಭಾಗಿಸಿದ್ದಾರೆ

ಸೂರ್ಯೋಪಾಸನೆಯ ಸರ್ವಪ್ರಥಮ ಸಂಕೇತವು ನಮಗೆ ವೇದದಲ್ಲಿ ಉಪಲಬ್ಧವಾಗಿದ್ದ ಋಗ್ವೇದ ಶಾಕಲ ಸಂಹಿತೆಯಲ್ಲಿ ಆ ಕೃಷ್ಣೇನ ಮತ್ತು ಹಂಸಃ ಶುಚಿಪುದ್ ಈ ಮಂತ್ರಗಳಿಂದ ಹಾಗೂ ಮೈತ್ರಾಯಣೀಯ ಸಂಹಿತೆಯಲ್ಲಿ ಭಗವಾನ್ ಸೂರ್ಯನಾರಾಯಣನ ಉಪಾಸನೆಯ ಮಹತ್ವ ತಿಳಿಸಿದ್ದಾರೆ ಗಾಯತ್ರೀ ಮಂತ್ರ ಸೂರ್ಯನ ತೇಜದೊಂದಿಗೆ ಸಂಬಂಧ ಜೋಡಿಸಲ್ಪಟ್ಟಿದೆ ವಿಭೂತಿ ವರ್ಣನೆಯಲ್ಲಿ ಜ್ಯೋತಿಷಾಂ ರವಿರಂಶುಮಾನ್ ಎಂದಿದೆ ಉಪನಿಷತ್‌ನಲ್ಲಿ ಆದಿತ್ಯ ಎಂದಿದ್ದಾರೆ ಗಾಯತ್ರೀ ಮಂತ್ರದಲ್ಲಿ ಸೂರ್ಯನ ರೂಪವನ್ನು ಪರಬ್ರಹ್ಮ ಪರಮೇಶ್ವರನ ಉಪಾಸನೆಯು ತಿಳಿಸಿದ್ದಾರೆ ಗಾಯತ್ರೀ ಮಂತ್ರದಲ್ಲಿ ಸವಿತೃ ರೂಪದಿಂದ ಸೂರ್ಯನನ್ನು ಸೂರ್ಯನ ಆರಾಧನೆ ಮತ್ತು ಪ್ರಾಕೃತಿಕ ನಿಯಮಗಳ ಪಾಲನೆಯಿಂದ ರೋಗಗಳು ದೂರವಾ



**ಗುತ್ತದಲ್ಲದೆ** ಸ್ವಾಸ್ಥ್ಯವು ಸ್ಥಿರವಾಗಿರುತ್ತದೆ ಎಂದಿ **ದ್ದಾರೆ ಋಗ್ವೇದದ** ಋಷಿಯು ಭಗವಾನ್ ಆದಿ **ತ್ಯನ** ಸ್ತುತಿಯಲ್ಲಿ ಎಲ್ಲೈ ಅಖಂಡ ನಿಯಮಗಳ **ಪಾಲನ ಕರ್ತ** ವರಮದೇವನೇ (ಆದಿತ್ಯಾಸೋ) **ನೀನು** ನಮ್ಮ ರೋಗಗಳನ್ನು ದೂರೀಕರಿಸು ನಮ್ಮ ದುರ್ಮತಿಗಳನ್ನು ದಮನಮಾಡು ನಮ್ಮ **ಪಾಪಗಳನ್ನು** ಹೊಡೆದೋಡಿಸು ಎಂದಿದೆ

ಮಾನವನ ಮಾನಸಿಕ ಶಾರೀರಿಕ ಹಾಗೂ **ವಾಚಿಕ** ಪಾಪಗಳು ಸೂರ್ಯಭಗವಾನನ ಕೃಪೆ **ಯಿಂದ** ನಿಃಶೇಷವಾಗಿ ನಷ್ಟವಾಗುತ್ತದೆ- ಸೂರ್ಯೋ **ಪಾಸನೆಯಿಂದ** ಅನೇಕ ರೋಗಗಳು - ಕಷ್ಟ **ಗಳು** ನಾಶಗೊಂಡು ದಾರಿದ್ರ್ಯವು ದೂರಗೊಂಡು ·ದೀರ್ಘಾಯುಷ್ಯವನ್ನು ಆರೋಗ್ಯವನ್ನು ಹಾಗೂ **ಧನವನ್ನು** ಪಡೆಯಬಹುದಾಗಿದೆ ಶ್ರೀಕೃಷ್ಣ ಪುತ್ರ ಸಾಂಬನು ಕುಷ್ಠರೋಗ ಪೀಡಿತನಾಗಿದ್ದನು ಗರು ಡನು ಶಾಕದ್ವೀಪದಿಂದ ವೈದ್ಯ ಬ್ರಾಹ್ಮಣರನ್ನು ಕರೆದು ತಂದಿದ್ದನು ಅವರು ಸೂರ್ಯಮಂದಿರ ವನ್ನು ಸಾಂಬನಿಂದ ಸ್ಥಾಪಿಸಿ ಸೂರ್ಯನ ಉಪಾ ಸನೆ ಮಾಡಿಸಿದರು ಆ ನಂತರವೇ ಸಾಂಬನು ಕುಷ್ಠರೋಗದಿಂದ ಗುಣಗೊಂಡನು ಈ ಕಥೆಯು ಭವಿಷ್ಯಪುರಾಣದ ಬ್ರಹ್ಮಪರ್ವದಲ್ಲಿ ಬರುತ್ತದೆ ಮಹಾರಾಜ ಭದ್ರೇಶ್ವರನ ಎಡಕೈ ಮೇಲೆ ಶ್ವೇತ ಕುಷ್ಠ ರೋಗವಾದಾಗ ಬ್ರಾಹ್ಮಣರ ಅನುಜ್ಞೆಯಿಂತೆ ಸೂರ್ಯನ ಉಪಾಸನೆ ಮಾಡಿ ಗುಣಹೊಂದಿ ದನು ಈ ಕಥೆಯು ಪದ್ಮ ಪುರಾಣದ ಸೃಷ್ಟಿ ಖಂಡ ೮೨ ನೆಯ ಅಧ್ಯಾಯದಲ್ಲಿ ಹೇಳಿದೆ ಮಯೂರ ಕವಿಯು ಕೂಡ ರೋಗ ನಿವಾರ ಣಾರ್ಥ ಸೂರ್ಯಶತಕವನ್ನು ರಚಿಸಿ ರೋಗಮುಕ್ತ ನಾದನು ಆದಿತ್ಯ ಹೃದಯ ಸ್ತೋತ್ರದ ಮೂಲಕ ಭಗವಾನ್ ಶ್ರೀ ರಾಮಚಂದ್ರನು ಸೂರ್ಯನಾರಾ ಯಣನನ್ನು ಸ್ತುತಿಸಿದ್ದಾನೆ ಶ್ರೀ ಹನುಮಂತನು ಭಗವಾನ್ ಸೂರ್ಯನ ಸಾನಿಧ್ಯದಲ್ಲಿ ಅಧ್ಯಯ ನವನ್ನು ಮಾಡಿದ್ದಾನೆ ಮಹರ್ಷಿ ಯಾಜ್ಞವಲ್ಕ್ಯರು ಸೂರ್ಯೋಪಾಸನೆಯಿಂದ ಶುಕ್ಲ ಯಜುರ್ವೇದ ವನ್ನು ರಚಿಸಿದರು ಸೂರ್ಯನ ಆರಾಧನೆಯನ್ನು ಮಾಡಿ ದ್ರೌಪದಿಯು ಅಕ್ಷಯಪಾತ್ರೆ ಪಡೆದುಕೊಂ ಡಳು ಸತ್ರಾಜಿತನಿಗೆ ಸೂರ್ಯನಿಂದಲೇ ಸ್ಯಮಂ ತಕ ಮಣಿಯು ದೊರಕಿತು ಅಗಸ್ತ್ಯಮಹರ್ಷಿಗಳು ಯುದ್ಧರಂಗದಲ್ಲಿ ಶ್ರೀರಾಮನಿಗೆ ಆದಿತ್ಯ ಹೃದಯ ಸ್ತೋತ್ರವನ್ನು ಉಪದೇಶಿಸಿದರು ಈ ಸ್ತೋತ್ರ ಪಾಠದಿಂದ ರಾಮನು ಜಯವನ್ನು ಪಡೆದುಕೊಂ ಡನು

ನಿರ್ಗುಣ ನಿರಾಕಾರ ಮತ್ತು ಸಗುಣ ನಿರಾಕಾರ ಹಾಗೂ ಸಗುಣ ಸಾಕಾರ - ಈ ಮೂರು ರೂಪ ಗಳು ಸೂರ್ಯಭಗವಾನನದಾಗಿದೆ ಆದಿತ್ಯಲೋಕ ದಲ್ಲಿ ಭಗವಾನ್ ಸೂರ್ಯ ನಾರಾಯಣನ ಸಾಕಾರ ವಿಗ್ರಹವಿದೆ ಅವನು ರಕ್ತ ಕಮಲದ ಮೇಲಿದ್ದು ಹಿರಣ್ಮಯವರ್ಣದ ಚತುರ್ಭುಜ ಹಾಗೂ ಎರಡು ಹಸ್ತಗಳಲ್ಲಿ ಪದ್ಮಧಾರಣೆ ಎರಡು ಕೈಗಳು ಅಭಯ ಹಾಗೂ ವರಮುದ್ರೆಯಿಂದ ಕೂಡಿವೆ ಅವನು ಏಳು ಕುದುರೆಗಳ ರಥದಲ್ಲಿ ಸವಾರಿ ಮಾಡು ವನು ಉಪಾಸಕರು ಈ ಸೂರ್ಯಭಗವಾನನ ಉಪಾಸನೆ ಮಾಡಿದರೆ ಮನೋವಾಂಛಿತ ಫಲ ಗಳು ಪ್ರಾಪ್ತವಾಗುತ್ತವೆ

ನಾಮರೂಪಗಳಲ್ಲಿ ಭಿನ್ನವಿದ್ದರೂ ಸೂರ್ಯ ನೊಬ್ಬನೇ ಆಗಿರುವನು ಭಗವಾನ್ ಸೂರ್ಯನ ಉತ್ಪತ್ತಿ ಮಾಹಾತ್ಮ್ಯವು ಭವಿಷ್ಯಪುರಾಣ ಬ್ರಹ್ಮಪ ರ್ವದಲ್ಲಿ, ವರಾಹಪುರಾಣದಲ್ಲಿಯ ಆದಿತ್ಯೋತ್ಪತ್ತಿ ಎಂಬ ಅಧ್ಯಾಯದಲ್ಲಿ ವಿಷ್ಣುಪುರಾಣದ ೨ನೆಯ ಅಂಕದ ೧೦ನೇ ಅಧ್ಯಾಯದಲ್ಲಿ ಕೂರ್ಮಪುರಾಣದ ೪೦ನೆ ಅಧ್ಯಾಯದಲ್ಲಿ ಮತ್ಸ್ಯಪುರಾಣದ ೧೦೧ರ ಅಧ್ಯಾಯದಲ್ಲಿದೆ ಇನ್ನು ಅನೇಕ ಪುರಾಣಗ ಳಲ್ಲಿ ಸೂರ್ಯನ ಉಲ್ಲೇಖ ಉಪಾಸನಾಬೋಧಗ ಳನ್ನು ಕಾಣಬಹುದಾಗಿದೆ ನಮಸ್ಕಾರ ಮಾಡುವ ದರಿಂದ ದೇವನು ಪ್ರಸನ್ನನಾಗುವನು ನಮಸ್ಕಾರ ಪ್ರಿಯೇ ಭಾನುರ್ಜಲ ಧಾರಾಪ್ರಿಯಃ ಶಿವಾಃ ಎಂದಿದೆ ಅದಕ್ಕಾಗಿ ಸೂರ್ಯೋಪಸ್ಥಾನದಿಂದ ಮತ್ತು ಸೂರ್ಯನಮಸ್ಕಾರದಿಂದ ಸೂರ್ಯಾ ರಾಧನೆ ಮಾಡಿ ಇಚ್ಛಿತ ಫಲಗಳನ್ನು ಪಡೆಯಬ ಹುದು

**ಅನಂತ ಚಿಂತಾಮಣಿ ಜ್ಯೋತಿಷೀ**

# ಭಕ್ತಿಯ ಸಾಕಾರ - ಪುರಂದರರು

ಮೂರ್ತಿ ರಾಮನಾಥಪುರ

ಹನ್ನೆರಡು ಮತ್ತು ಹದಿಮೂರನೆಯ ಶತಮಾನದ ವಚನಸಾಹಿತ್ಯದ ಪುನರುಜ್ಜೀವನವೇ ಈ ಸಾಹಿತ್ಯಕ್ಕೆ ನಾಂದಿ ವಿಜಯನಗರದ ವೈಭವೋಪೇತ ಜೀವನ ನಡೆಸಿದ ಶ್ರೀ ಕೃಷ್ಣದೇವರಾಯನ ಕಾಲದಲ್ಲಿ ಸಾಮ್ರಾಜ್ಯದ ಕೀರ್ತಿ, ಬಲ, ವಿಸ್ತಾರ, ಐಶ್ವರ್ಯಗಳು ಹೊರ ದೇಶಕ್ಕೂ ಹರಡಿ ಅನೇಕ ಮಂದಿ ವೈಭವವನ್ನು ಕಣ್ಣಾರೆ ಕಂಡು ವರ್ಣಿಸಿರುವುದು ಗೊತ್ತಿರುವ ವಿಷಯ ಮುಸಲ್ಮಾನರ ಹೊಡೆತದಿಂದ ಭಾರತದ ಧರ್ಮ - ಸಂಸ್ಕೃತಿಗೆ ಧಕ್ಕೆಯಾಗಿ ಪರಂಪರೆಯಿಂದ ಬಂದ ಸಾಮಾಜಿಕ ವ್ಯವಸ್ಥೆಯನ್ನು ಕಾಪಾಡುವುದೇ ವಿಜಯನಗರ ಸ್ಥಾಪನೆಯ ಗುರಿ

ಈ ದೃಷ್ಟಿಯಲ್ಲಿ ಚಕ್ರವರ್ತಿಯನ್ನೊಳಗೊಂಡಂತೆ ಎಲ್ಲರ ಗೌರವಾದರಗಳಿಗೆ ಬ್ರಾಹ್ಮಣವರ್ಗ ಸಮಾಜದಲ್ಲಿ ಪಾತ್ರವಾಗಿತ್ತೆಂಬುದು ಪ್ರವಾಸಿಗಳ ಕಥನಗಳಲ್ಲಿಯೂ ಕಂಡುಬರುತ್ತದೆ ವಿದ್ವತ್ತು ಸರಳಜೀವನ, ನಿರ್ಮಲ ಚಾರಿತ್ರ್ಯ, ಪ್ರಾಮಾಣಿಕತೆ ಅವರನ್ನು ದೊಡ್ಡ - ದೊಡ್ಡ ಹುದ್ದೆಗಳಿಗೂ, ಜನಸಾಮಾನ್ಯರಿಗೆ ಮಾರ್ಗದರ್ಶನ ಕಾರ್ಯಕ್ಕೂ ದಾರಿ ಮಾಡಿಕೊಟ್ಟಿತು ಧಾಂಬಿಕ ಬ್ರಾಹ್ಮಣರಿದ್ದರೂ ಅವರಿಂದ ಸಾಮಾಜಿಕ, ಸಾಂಸ್ಕೃತಿಕವಾಗಿ ಅಡ್ಡಿಯಾಗಲಿಲ್ಲ ಬ್ರಾಹ್ಮಣರ ಮುಖ್ಯ ಧರ್ಮ ಶಿಕ್ಷಣವಾಗಿತ್ತು ರಾಜರು, ಸಾಮಂತರು, ಪಾಳೆಗಾರರು- ವಿದ್ಯಾವಂತರಿಗೂ, ವಿದ್ಯಾ ಸಂಸ್ಥೆಗಳಿಗೂ ಬ್ರಾಹ್ಮಣರಿಗೂ ದಾನ - ದತ್ತಿ, ಹಣಸಹಾಯವನ್ನು ಮಾಡುತ್ತಿದ್ದರು ಇದರಿಂದಲೇ ಆ ಕಾಲದಲ್ಲಿ ಸಂಸ್ಕೃತ, ತೆಲುಗು, ಕನ್ನಡ ವಾಙ್ಮಯ ಯಥೇಚ್ಛವಾಗಿ ಬೆಳೆಯಿತು

ಇದಕ್ಕೆ ಪೂರಕವಾಗಿ ದೇವಾಲಯ ಧಾರ್ಮಿಕ ಕೇಂದ್ರದ ಒಂದು ಅಂಗವಾಗಿತ್ತು ಸಾಂಸ್ಕೃತಿಕ ಚಟುವಟಿಕೆಗಳು, ಸಾಮಾಜಿಕ ಸಮಸ್ಯೆಗಳ ಚರ್ಚೆ, ಧಾರ್ಮಿಕ ಕಾರ್ಯಗಳ ಮಂದಿರ ಎಲ್ಲವೂ ಆ ಕಾಲದ ಅರಸರ ಶಾಸನಗಳ ಉಲ್ಲೇಖದಿಂದ ಹಾಗೂ ದತ್ತಿ - ಪತ್ರಗಳಿಂದ ತಿಳಿಯುತ್ತದೆ ಈ ಸಂದರ್ಭದಲ್ಲಿ ವ್ಯಾಸರಾಯರ ಶಿಷ್ಯರಾದ ಪುರಂದರದಾಸರು - ಕನಕದಾಸರು ಗುರುಭಕ್ತಿ - ಭಾಗವತಧರ್ಮ ಪ್ರಸಾರಮಾಡಿ ತನ್ಮೂಲಕ ತಮ್ಮ ಧ್ಯೇಯವಾದ ಸಮಾಜಸೇವೆಯನ್ನು ಮಾಡಲಾರಂಭಿಸಿದರು ಜಾತಿ - ಮತಗಳ ಭೇದವಿಲ್ಲದ ಸಮಾಜಕಲ್ಯಾಣಕ್ಕಾಗಿ, ಸಾಮಾಜಿಕ ಸ್ವಾಸ್ಥ್ಯಕ್ಕಾಗಿ ಸುಲಭ - ಸುಂದರ ಪದ್ಯಗಳನ್ನು ಸರಾಗವಾಗಿ ಹಾಡುತ್ತಾ ಕರ್ನಾಟಕವನ್ನೇ ಸುತ್ತಿದ್ದರು ಇಂತಹವರಲ್ಲಿ ಪುರಂದರದಾಸರು ಕರ್ನಾಟಕ ಸಂಗೀತದ ಅತ್ಯಂತ ಶ್ರೇಷ್ಠ ಪ್ರಭಾವಿ ಉದ್ಧಾರಕರಾಗಿ ಜಾತಿ - ಜಾತಿಗಳಲ್ಲಿ ಪ್ರೀತಿ - ಸಹಕಾರವನ್ನು ಬೆಳಸಲು ಹೆಣಗಿದರು ಇದಕ್ಕೆ ಅಂದಿನ ಸಮಾಜ ರಚನೆ ಬಹಳಷ್ಟು ನೆಮ್ಮದಿಯನ್ನು ತಂದಿತ್ತು ಬಹಳಷ್ಟು ಜಟಿಲತೆಯುಂಟಾದರೆ ಅಲ್ಲಲ್ಲಿಯೇ ಬಗೆಹರಿಸುವ ಪದ್ಧತಿ ಇತ್ತು" ಸಮಾಜದ ಎಲ್ಲ ವೈಶಿಷ್ಟಗಳಿಂದ ಕುಟುಂಬ ವಾತ್ಸಲ್ಯ, ಸ್ತ್ರೀಯರ ಸ್ಥಾನಗೌರವ, ಆಟ - ನೋಟದ ಬಗ್ಗೆಯೂ ತಿರುವುಂಟಾಯಿತು ಮಾನವ ಧರ್ಮವೇ - ನೆಮ್ಮದಿಯನ್ನು ಕೊಡತಕ್ಕ ಉತ್ತಮ ಶ್ರೀಗಂಧ ಎಂಬುದು ದಾಸರ ಮಾತಿನಿಂದ ತಿಳಿಯುತ್ತದೆ ಧರ್ಮವೇ ಜಯವೆಂಬ ದಿವ್ಯಮಂತ್ರ || ಮರ್ಮವನ್ನರಿತು ಮಾಡಬೇಕು ತಂತ್ರ || ಇತ್ಯಾದಿ

ಶಿವಶರಣರಂತೆ ಕನ್ನಡ ನುಡಿಯ ಶಕ್ತಿಯನ್ನು, ನಿತ್ಯ - ಸತ್ಯಗಳನ್ನು ಜೀವನದಲ್ಲಿ ಕಂಡು, ಆ ಅನುಭವಗಳನ್ನು ಹಾಡುಗಳಾಗಿ ಕಟ್ಟಿ ಕೀರ್ತನೆಗಳು, ಸುಳಾದಿಗಳು, ಉಗಾಭೋಗಗಳ ಮೂಲಕ ಸಾಹಿತ್ಯ ಜಗತ್ತಿಗೆ ಕೊಟ್ಟಿದ್ದಾರೆ. ಅವರು ರಚಿಸಿದ ಕೀರ್ತನೆಗಳು ಲೆಕ್ಕದಲ್ಲಿ 475 ಲಕ್ಷವಾದರೂ ಸಿಕ್ಕಿರುವುದು ಸಾವಿರಕ್ಕೆ ಸ್ವಲ್ಪ ಹೆಚ್ಚು ಕೇವಲ ಮತೀಯ ಗೌರವದಿಂದ ಕೀರ್ತನೆಗಳನ್ನು ನೋಡದೆ ಅನುಭವ ಸಂತೃಪ್ತಿ, ಅಭಿವ್ಯಕ್ತಿಯ ಪ್ರಕ್ರಿಯೆಯಿಂದ ಪಡೆದ ಸಾಹಿತ್ಯ ಸೌಂದರ್ಯದೃಷ್ಟಿಯಿಂದ ಬೆಲೆ ಕೊಡಬೇಕಾದುದಾಗುತ್ತದೆ ಸಂಗೀತ ಗುಣವುಳ್ಳ ದೇವರ ಹಾಡುಗಳು, ಹರಿಗುರುಗಳ ಸ್ಮರಣೆ, ಅಂತರಂಗ ನಿವೇದನೆ, ಕೃಷ್ಣಲೀಲೆ, ಸಮಾಜ ವಿವರಣೆ, ನೀತಿ ಬೋಧನೆಗಳಿಂದ ಕೂಡಿದ ಎಲ್ಲವೂ ಹಲವು ಕಲ್ಲು ಸಕ್ಕರೆ ಚೂರುಗಳಂತಿವೆ "ನಾರಾಯಣ ನಿಮ್ಮ ನಾಮದ ಸ್ಮರಣೆಯ ಸಾರಾಮೃತವೆನ್ನ ನಾಲಿಗೆಗೆ ಬರಲಿ" ಎಂಬ ನುಡಿಯಿಂದ ಅವರ ನೈಜ (ಅತ್ಯಂತ) ಅಂತರಂಗದ ಬಯಕೆ, ತನ್ನ ಸರಳ ಉತ್ಕಟತೆಯಲ್ಲಿ ಅಭಿವ್ಯಕ್ತವಾಗಿದೆ ಅವರ ಕೀರ್ತನೆಗಳಲ್ಲಿನ ಮಾಧುರ್ಯ, ಚಿತ್ರ ರಮ್ಯತೆಗೆ ಸಾಕ್ಷಿಯಾದುವು ಹಲವಿವೆ ೧) ನೀ ದಯಾಳೋ ನಿರ್ಮಲಚಿತ್ತ ೨) ಯಾದವ ನೀ ಬಾ ಯದುಕುಲನಂದನ ೩) ಹುವ್ವ ತರುವರ ಮನೆಗೆ ಹುಲ್ಲತರುವ ಇತ್ಯಾದಿ



ಅಂತರಂಗ ಕೀರ್ತನೆಗಳಲ್ಲಿ ಭಕ್ತಿ ಜೀವನದ ಬಯಕೆ – ಬೇಡಿಕೆಗಳು, ಕುಗ್ಗು – ಕೊರತೆಗಳು ವ್ಯಕ್ತವಾಗಿವೆ – ಕಂಡು – ಕಂಡು ನೀ ಎನ್ನ ಕೈಬಿಡುವರೆ, ಆದದ್ದೆಲ್ಲ ಒಳಿತೇ ಆಯಿತು, ಇನ್ನೂ ದಯಬಾರದೇ ದಾಸನ ಮೇಲೆ, ನಕಲ ಗ್ರಹಬಲ ನೀನೆ, ಕಾಯಲಾರೆನು ಕೃಷ್ಣ ಕಂಡವರ ಬಾಗಿಲನು, ಸಂಸಾರವೆಂಬಂಥ ಭಾಗ್ಯವಿರಲಿ, ಅನುಭವದಡಿಗೆಯ ಮಾಡಿ – ಇನ್ನಿತರ ಕೀರ್ತನೆಗಳಲ್ಲಿ ಆರ್ತ ಭಕ್ತನ ಕೋರಿಗೆ – ಕಳವಳ, ಭಕ್ತನ ಸಮರ್ಪಣಾ ಭಾವ, ಭಾವಗೀತೆಯ ಸೌಂದರ್ಯ ರಮಣೀಯವಾಗಿ ಕಾಣುತ್ತವೆ ಕೃಷ್ಣಲೀಲೆಯ ಕೀರ್ತನೆಗಳಲ್ಲಿ ಶೃಂಗಾರ, ವಾತ್ಸಲ್ಯ, ಹಾಸ್ಯರಸಗಳು ಎದ್ದು ಕಾಣುತ್ತವೆ ಆಡಿದನು ರಂಗ ಅದ್ಭುತದಿಂದಲಿ ಕಾಳಿಂಗನ ಫಣೆಯಲಿ, ಹೋಗದಿರಲೋರಂಗ ಬಾಗಿಲಿಂದಾಚೆಗೆ – ಮುಂತಾದವು ಸಮಾಜ ಜೀವನವನ್ನು ಜೀವನಿಷ್ಠೆಯಿಂದ, ಕಟುವಿಮರ್ಶೆಯಿಂದ ಚಿತ್ರಿಸಿದ್ದಾರೆ ನಗೆಯು ಬರುತಿದೆ, ಮೂರ್ಖರಾದರು ಜನರು ಲೋಕದೊಳಗೆ, ಮಡಿ ಮಡಿ ಎಂದು ಅಡಿಗಡಿ ಹಾರುವಿ – ಇತ್ಯಾದಿ ಸಮಾಜ ಬೋಧನೆ, ಅಭಿಪ್ರಾಯ ಮಹತ್ವ, ಗೇಯತೆ, ಮತ ತತ್ವ ಮುಂತಾದ ಗುಣಗಳಿಂದ ಕೂಡಿದ ಕೀರ್ತನೆಗಳು ಪ್ರಸಿದ್ಧವಾಗಿವೆ ಭಕ್ತಿ – ಜ್ಞಾನ – ವೈರಾಗ್ಯಗಳ ಗಣಿ ಅವರ ಕೀರ್ತನೆಗಳು

ಪುರಂದರದಾಸರ ಕೀರ್ತನೆಗಳಂತೆ ಉಗಾಭೋಗ – ಸುಳಾದಿಗಳನ್ನು ಓದುತ್ತಿದ್ದರೆ ಆಧ್ಯಾತ್ಮ ಸಾಧನೆಯ ಆತ್ಮ ಚರಿತ್ರೆ, ಕಂಡು ಅನುಭಾವಿಸಿದ ಕೃಷ್ಣಲೀಲೆ, ಭಕ್ತಿ, ಜನಸಾಮಾನ್ಯರ ಚೇತನವಾದ ಉಪದೇಶಾಮೃತ ಗುಣಗಳು ಕಾಣುತ್ತವೆ ಪುರಂದರದಾಸರು ೭೪,೦೦೦ ಸುಳಾದಿಗಳನ್ನು ರಚಿಸಿ ಅವುಗಳಲ್ಲಿ ಅಲ್ಪ – ಸ್ವಲ್ಪ ಸಿಕ್ಕಿರುವುದೆಂದು ತಿಳಿದುಬರುತ್ತದೆ ಅವರ ಸುಳಾದಿಗಳಲ್ಲಿ ಉಗಾಭೋಗದಂತೆ ಆಧ್ಯಾತ್ಮಿಕ ಜೀವನದ ಹಿರಿಮೆ ತಾತ್ವಿಕ ದೃಷ್ಟಿ ಕಾಣುತ್ತವೆ ಗಹನ ವಿಷಯ ದಿವ್ಯಾನುಭವದಿಂದ ಈ ಸುಳಾದಿ – ಉಗಾಭೋಗಗಳ ಸೃಷ್ಟಿಯಾಗಿವೆ "ಇಂದಿನವಾರ ಶುಭವಾರ, ಇಂದಿನ ತಾರೆ ಶುಭತಾರೆ ಶುಭ ದಿನವು" ಇದು ಉಗಾಭೋಗಕ್ಕೆ ಒಳ್ಳೆಯ ಉದಾಹರಣೆ ಆಚಾರ್ಯರನ್ನು ಕುರಿತಂತೆ ಅನುಗ್ರಹ, ಗುರೂಪದೇಶ, ಸೇವೆ, ನವವಿಧ ಭಕ್ತಿ ಮುಂತಾದುವನ್ನು ಸುಳಾದಿಗಳಲ್ಲಿ ತಾತ್ವಿಕವಾಗಿ ತಿಳಿಸಿದ್ದಾರೆ ಅವರು ಜೀವನಾನುಭವ, ಚಿತ್ತ ಚಾಂಚಲ್ಯ, ಚಿತ್ತ ಶುದ್ಧಿ ಮುಂತಾದ ಅರ್ಥವತ್ತಾದ ಉಗಾಭೋಗಗಳನ್ನು ರಚಿಸಿದ್ದಾರೆ ಇದಕ್ಕೆ ಉದಾ – ಚಿತ್ತ ಶುದ್ಧಿಯಿಲ್ಲದವಗೆ ಮಂತ್ರದ ಫಲವೇನು? ಮರ್ಕಟನ ಕೈನೂಲು ಗುಕ್ಕರಿಯ ತೆರನಂತೆ, ಈ ಸಂಸಾರ ಸುಖವೆಲ್ಲ ವ್ಯರ್ಥವಾಯಿತಲ್ಲ, ಹೊಲೆಯಬಂದಾನೆಂದು ಒಳಗೆ ದೇವರಮಾಡಿ ಗಣಗಣ ಗಂಟೆ ಬಾರಿಸುವರಯ್ಯಾ"– "ಮಿತವಾದ ಮಾತು, ಹಿತವಾದ ಸರಣಿ, ಉತ್ಕಟಾನುಭವದಿಂದ ಉಗಾಭೋಗಗಳು – ರತ್ನ – ವೈಡೂರ್ಯಗಳಂತಿವೆ" ಎಂಬ ಮಾತು ಸತ್ಯವಾದುದು ಹೀಗೆ ಜೀವನದ ಎಲ್ಲ ಮುಖಗಳೂ ಅವರ ಸಾಹಿತ್ಯ ಲಹರಿಯಿಂದ ಸಾಹಿತ್ಯಕ್ಷೇತ್ರಕ್ಕೂ, ಕರ್ನಾಟಕ ಸಂಗೀತ ಕ್ಷೇತ್ರಕ್ಕೂ ಸ್ಥಾಯಿರೂಪದ ಬೆಳಗುಂಟುಮಾಡಿದೆ

ಭಗವಂತನನ್ನು ಸೇರುವ ಮಾರ್ಗವಾದ ಭಕ್ತಿಯಲ್ಲಿ ದಾಸ್ಯ, ಅನನ್ಯ ಶರಣಾಗತಿ ಉನ್ನತ ಅಂಗಗಳೆಂದು ಪುರಂದರರು ಹೇಳುತ್ತಾರೆ ಇದಕ್ಕೆ ವಿಠಲನ ಭಜನೆ ಸೂಕ್ತ ಮಾಧ್ಯಮವೆಂದು ತಿಳಿಸಿದ್ದಾರೆ ಇದು ಎಲ್ಲರಿಂದಲೂ ಆಗದ ಮಾತು ಎಂದು, ಕಮಲದ ಪರಿಮಳವನ್ನು ದುಂಬಿಯು ಸವಿಯುವಂತೆ ಕಪ್ಪೆಯು ಹೇಗೆ ಸವಿಯಲಾರದೋ, ರಸ ಭರಿತವಾದ ಕಬ್ಬನ್ನು ಕುರಿಯು ಸವಿಯದಂತೆಯೇ ಮೂಢನು ದೃಢಭಕ್ತಿಯನ್ನು ಅರಿಯನು ಎನ್ನುತ್ತಾರೆ ಆದರೆ ಡಾಂಬಿಕ ಭಕ್ತಿಯ ಬಗ್ಗೆ ಎಚ್ಚರಿಕೆ ಕೊಟ್ಟಿದ್ದಾರೆ 'ಉದಯಕಾಲದಲೆದ್ದು ಗಡಗಡ ನಡುಗುತ' ಎಂಬಲ್ಲಿ ಡಾಂಬಿಕತೆಯಿಂದ ಭಕ್ತನಂತೆ ನಟಿಸುವವನಿಗೆ ಇದೆಲ್ಲವೂ ಉದಯವೈರಾಗ್ಯವಿದು ಎಂದು ಹೇಳುತ್ತಾರೆ ಆದ್ದರಿಂದ ಮನುಷ್ಯ ಏನು ಬಂದರೂ ದೇವರ ಇಚ್ಛೆ ಎಂದು ಮೌನದಿಂದ ಧ್ಯಾನಿಸಿದರೆ ಸಿದ್ಧಿಯುಂಟೆಂದು ಅಭಿಪ್ರಾಯ

ಭಕ್ತಿಮಾರ್ಗದಲ್ಲಿ ಸಾಧಕನು ದೇವರಿಗಾಗಿ ಏನು ಮಾಡಿದರೂ ಅದು ಅಲ್ಪವೇ ಕಾರಣ, ಪರಮಾತ್ಮ ಪರಿಪೂರ್ಣ "ಸಂಗೀತ ಕೀರ್ತನೆಗಳಿಂದ ಹಾಡಿ ಮೆಚ್ಚಿಸೋಣವೆಂದರೆ ಗಾನ ವಿದ್ಯಾ ವಿಶಾರದರಾದ ತುಂಬುರು, ನಾರದರೆ ಹಾಡಿ ಅವನ ಗುಣಗಾನ ಮಾಡುತ್ತಿದ್ದಾರೆ" "ಹಾಸಿಗೆಯನ್ನು ತಂದು ಹಾಸೋಣವೆಂದರೆ ಆದಿಶೇಷನ ಮೇಲೆಯೇ ಮಲಗಿದ್ದಾನೆ" ಆದ್ದರಿಂದ ದೀನ ರಕ್ಷಕನೂ, ಪೂರ್ಣಾನಂದನಾದ ಪುರಂದರವಿಠಲನನ್ನು ಧ್ಯಾನಿಸಿಯೇ ಮೆಚ್ಚಿಸಬೇಕೆನ್ನುತ್ತಾರೆ ಭಕ್ತಿಯನ್ನು ಗಳಿಸಿ ಮುಕ್ತಿ ಪಡೆಯಲು ಮಾಡಬೇಕಾದ ಸಾಧನೆಯನ್ನು ಬಹುಮಾರ್ಮಿಕವಾಗಿ ಚಿತ್ರಿಸಿದ್ದಾರೆ – "ಹರಿಚರಣವೆಂಬ ಕಾಮಧೇನುವನ್ನು, ಗುರುಬೋಧೆ ಎಂಬೋ ಕಣ್ಣಿಯಲ್ಲಿ ಕಟ್ಟಿ, ಭಕ್ತಿಯೆಂಬ ಕುರುವನ್ನು ಬಿಟ್ಟು, ಯಾವಾಗಲೂ ವಿರಕ್ತಿಯೆಂಬ ಗನದೆಳೆಯನ್ನು ಹಾಕಿ ಯೋಗ್ಯವಾದ ಮತ್ತು ಅನಿತ್ಯವಾದ ದೇಹವೆಂಬ ಪಾತ್ರೆಯೊಳಗೆ ರಾಮನಾಮವೆಂಬ ಹಾಲನ್ನು ಕರೆಯಬೇಕು" – ಎಂದು ಮುಂತಾಗಿ ಹೇಳುವುದು ಲೋಕ ವ್ಯವಹಾರದಿಂದ ಮುಕ್ತರಾಗಿ ವಿಠಲನ ಧ್ಯಾನಾಸಕ್ತರಾಗಬೇಕೆಂದು ಉಪದೇಶಿಸುತ್ತಾರೆ

ಪುರಂದರರು ಭಕ್ತಿಯನ್ನು ವ್ಯಾಪಾರಕ್ಕೆ ಹೋಲಿಸಿ ವರ್ಣಿಸುತ್ತಾರೆ ನಾಲಿಗೆ ಎಂಬ ಎತ್ತನ್ನು ಗಾಡಿಗೆಕಟ್ಟಿ, ದೇಹವೆಂಬ ಗೋಣಿಯಲ್ಲಿ ರಾಮನಾಮವೆಂಬ ಸರಕನ್ನು ತುಂಬಿ ವ್ಯಾಪಾರಮಾಡಿ ಮುಂದುವರಿದಾಗ ಇಂದ್ರಿಯಗಳೆಂಬ ಸುಂಕದವರು ಅಡ್ಡಬಂದರೆ ಮುಕುಂದ ಮುದ್ರೆಯನ್ನು ತೋರಿಸಿ ಅವರನ್ನು ಓಡಿಸಿ ಅಚಲಾನಂದನಾದ ಪುರಂದರವಿಠಲನಲ್ಲಿ ಭಕ್ತಿಯಿಂದ ಮುಕ್ತಿ ಹೊಂದುವಂತೆ ಹೇಳುತ್ತಾರೆ ಸತ್ಕಥೆ, ಸಚ್ಛಾಸ್ತ್ರಗಳಿಂದ ಸರ್ವ ಸಂಪತ್ತನ್ನು ಹರಿಸಮರ್ಪಣೆ ಮಾಡಿದರೆ ಮುಕ್ತಿಯುಂಟೆಂದು ಹೇಳುತ್ತಾರೆ ಸಾಧಕನಾದವನು ವಿವಿಧ ಇಂದ್ರಿಯಗಳಿಂದ ಹರಿಸೇವೆ ಮಾಡಿದರೆ ತೀರ್ಥಾಟನೆಯ ಫಲ ಸಿಗುತ್ತದೆ ಎಂಬ ಸೂಚನೆಯೂ ಇದೆ ಉದಾ – ಶ್ರೀಧರನಿಗೆ ಶರಣು ಬರುವ ಶಿರವು ಬದರಿಯು, ಲಕ್ಷ್ಮೀಪತಿಯನ್ನು ಪೂಜಿಸುವ ಕೈ ಕಂಚಿಯೂ ಆಗಿದೆ ಪ್ರೇಮ ಮತ್ತನಾದ ಭಕ್ತನಲ್ಲಿ ದೇವದರ್ಶನಾಪೇಕ್ಷೆ ತೀಕ್ಷ್ಣವಾಗಿ ಅವನ ಅಂತರಂಗ ಕಾತರಗೊಂಡಾಗ ಅನನ್ಯ ಶರಣಭಾವದಿಂದ ದೈನ್ಯಭಕ್ತನಂತೆ, ಆರ್ತನಾದದಿಂದ ಸನ್ಮಾರ್ಗತೋರಿಸೆಂದು, ಮೋಹಪಾಶ ಬಿಡಿಸೆಂದು ಧ್ಯಾನಮಾಡಬೇಕೆನ್ನುತ್ತಾರೆ ತಮ್ಮ ಕಾವ್ಯರಾಶಿಯಲ್ಲಿ ಹರಿದರ್ಶನಾಪೇಕ್ಷೆಯಿಂದ ಭಕ್ತಿಯ ಹೊನಲನ್ನೇ ಹರಿಸಿದ್ದಾರೆ ನಿಜ ಭಕ್ತನ ಆಂತರ್ಯದ ಕರೆಗೆ ಭಗವಂತನ ವಾತ್ಸಲ್ಯ, ಹೃದಯಂಗಮ ಎಂದು ವರ್ಣಿಸುತ್ತಾರೆ ಪುರಂದರದಾಸರು

***

ಹಸಿರಿದ್ದರೆ ಉಸಿರು

ಹಸಿರಿದ್ದರೆ ಬೆಳಸು

ಹಸಿರಿದ್ದರೆ ಉಣಿಸು

"ವೃಕ್ಷೋ ರಕ್ಷತಿ ರಕ್ಷಿತಃ"

ಹಸಿರನ್ನು ಕಾಪಾಡಿ

ಅದು ನಿಮ್ಮನ್ನು ಕಾಪಾಡುತ್ತದೆ

# ಭದ್ರಾಚಲ

**ಸುಮನ ಬದರೀನಾಥ**

ಪವಿತ್ರವಾದ ಈ ಭರತಭೂಮಿಯಲ್ಲಿ ಆಸೇತು ಹಿಮಾಚಲ ಪರ್ಯಂತ ಶ್ರೀರಾಮಚಂದ್ರ ಸ್ವಾಮಿಯ ಅನೇಕ ಭವ್ಯ ದೇವಾಲಯಗಳು ಕಂಡು ಬರುತ್ತವೆ ಅವುಗಳಲ್ಲಿ ಬಹು ಹಿಂದಿನಿಂದಲೂ ಭದ್ರಾಚಲವು ಬಹು ಪ್ರಸಿದ್ಧವಾದುದು ಪರಮ ಪಾವನೆಯಾದ ಗೋದಾವರೀತೀರ ಮಹಾಭಕ್ತರ ನೇಕರ ಭಕ್ತಿಭಾವ ಪುಲಕಿತ ದಿವ್ಯಭೂಮಿ, ದೇಹ ಮನಸ್ಸುಗಳನ್ನು ಪವಿತ್ರೀಕರಿಸಿ ಪರಮಾತ್ಮನ ದಿವ್ಯ ಸನ್ನಿಧಾನಕ್ಕೊಯ್ಯುವ ಪ್ರಕೃತಿಯ ಮಂಗಳತಾಣ ಇವೆಲ್ಲವೂ ಸೇರಿ ಭದ್ರಾಚಲ ಸಂದರ್ಶನೀಯ ಪುಣ್ಯಕ್ಷೇತ್ರವಾಗಿವೆ

ಪುರಾಣಕಾಲದಲ್ಲೂ ಇತಿಹಾಸ ಕಾಲದಲ್ಲೂ ಪ್ರಸಿದ್ಧವಾದ ಸ್ಥಳ ಭದ್ರಾಚಲ ಮೇರು ಮತ್ತು ಮೇರು ದೇವಿಯರು ಸಂತಾನವಿಲ್ಲದೆ ಬಹುಕಾಲ ತಪಸ್ಸನ್ನಾಚರಿಸಿ ಭದ್ರ ಮತ್ತು ನೀಲ ಎಂಬ ವಿಷ್ಣುಭಕ್ತರಾದ ಅವಳಿ ಮಕ್ಕಳನ್ನು ಪಡೆದರು ಮೇರು ತನ್ನಿಬ್ಬರು ಮಕ್ಕಳಿಗೂ ನಾರಾಯಣನ ಕೃಪಾಕಟಾಕ್ಷಕ್ಕಾಗಿ ತಪಸ್ಸನ್ನಾಚರಿಸಲು ಆದೇಶವಿತ್ತ ನೀಲನು ಪುರಿ ಜಗನ್ನಾಥದ ಸಮೀಪವಿರುವ ನೀಲ ಗಿರಿಯಲ್ಲಿಯೂ ಭದ್ರನು ಭದ್ರಾಚಲದಲ್ಲಿಯೂ ದೀರ್ಘಕಾಲ ತಪಸ್ಸನ್ನಾಚರಿಸಿದರು ಸೀತಾಪಹರ ಣದ ನಂತರ ಸೀತೆಯನ್ನರಸುತ್ತಾ ರಾಮಲಕ್ಷ್ಮಣರು ಭದ್ರನು ತಪಸ್ಸನ್ನಾಚರಿಸುತ್ತಿದ್ದೆಡೆಗೆ ಬಂದರು ಭದ್ರನು ಶ್ರೀರಾಮನನ್ನು ಸೀತಾ ಲಕ್ಷ್ಮಣ ಸಮೇತನಾಗಿ ತನ್ನ ಶಿರಸ್ಸಿನಲ್ಲಿ ಕುಳಿತು ಭಕ್ತರಿಗೆ ದರ್ಶನ ನೀಯುತ್ತಾ ಅನುಗ್ರಹಿಸಲು ಬೇಡಿಕೊಂಡನು ಸೀತೆ ದೊರಕಿದ ನಂತರ ಅವಳೊಂದಿಗೆ ಭದ್ರನಲ್ಲಿಗೆ ಬರುವುದಾಗಿ ಅಭಯವಿತ್ತು ಶ್ರೀರಾಮನು ಮುಂದೆ ಹೊರಟನು ಆದರೆ ಭದ್ರನಲ್ಲಿಗೆ ಬರುವುದನ್ನು ಮರೆತು ವೈಕುಂಠಕ್ಕೆ ಪಯಣಿಸಿಯೂ ಬಿಟ್ಟನು

ಭದ್ರ ದೇವರಿಗಾಗಿ ನಿರೀಕ್ಷಿಸುತ್ತಾ ತಪಸ್ಸನ್ನು ಮುಂದುವರೆಸಿದನು ತಪಸ್ಸಿನ ಬಿಸಿ ದೇವಲೋ ಕಕ್ಕೂ ತಟ್ಟಿತು ಶ್ರೀರಾಮನು ವಿಷ್ಣುರೂಪದಲ್ಲಿ ಬಂದು ದರ್ಶನವೀಯಲು ಭದ್ರನು ಶ್ರೀರಾ ಮಚಂದ್ರಮೂರ್ತಿಯ ದರ್ಶನವನ್ನೇ ಬಯಸಲು ದೇವರು ಚತುರ್ಭುಜನಾಗಿ ಶಂಖ ಚಕ್ರ ಕೋದಂ ಡಧಾರಿಯಾಗಿ ಸೀತಾಲಕ್ಷ್ಮಣ ಸಮೇತನಾಗಿ ಭದ್ರ ನಿಗೆ ದರ್ಶನವಿತ್ತ



ಭವಿಷ್ಯಸಿ ಮಹಾತ್ಮ ತ್ವಂ
ಭಕ್ತೋಽ ಗಿರಿರೂಪಭೃತ್
ರಾಮ ಭದ್ರ ಪದಂಗತ್ವ
ಭದ್ರಾದ್ರಿರಿತಿ ವಿಶ್ರುತಿ ||

ಎಂದೂ,

ವಸಾಮಿ ಶಿಖರೇ ಭದ್ರ!
ತವ ಯಾವದ್ದರ್ಶತಿ ಭೂಮಿ
ಭೂತಾನಿ ಕಲ್ಪಾಂತೇ
ಮತ್ಸಾಯುಜ್ಯಮವಾಪ್ಸ್ಯಸಿ ||

ಎಂದೂ ಭದ್ರನಿಗೆ ವರವಿತ್ತು ಅವನ ಕೋರಿ ಕೆಯಂತೆ ಭಕ್ತರ ಅನುಗ್ರಹಕ್ಕಾಗಿ ಅಲ್ಲೇ ನೆಲೆನಿಂತ ಭದ್ರನು ತಕ್ಷಣವೇ ಹುತ್ತವಾಗಿ ಮಾರ್ಪಟ್ಟು ಆ ವಿಗ್ರಹಗಳನ್ನಾವರಿಸಿ ನಿಂತ

ಹೀಗೆ ಬಹುಕಾಲ ಸಂದಿತು ಸುಮಾರು 16–17 ನೇ ಶತಮಾನದಲ್ಲಿ ಇಂದಿನ ದೇವಾಲ ಯದ ಸಮೀಪದಲ್ಲೇ ಇದ್ದ ಭದ್ರರೆಡ್ಡಿಪಾಳ್ಯದಲ್ಲಿ ಪೋಕಾಲ ಧಮ್ಮಕ್ಕ ಎನ್ನುವ ಮಹಿಳೆ ವಾಸಿಸು ತ್ತಿದ್ದಳು ಸಂತಾನವಿಲ್ಲದ ಅವಳು ಒಬ್ಬ ಹುಡು ಗನನ್ನು ಸಾಕುತ್ತಾ ಅವನನ್ನು ರಾಮ ಎಂದು ಕರೆಯುತ್ತಿದ್ದಳು ಶ್ರೀರಾಮನ ಅನನ್ಯ ಭಕ್ತಳ ವಳು ಹತ್ತಿರವಿದ್ದ ಅರಣ್ಯದಲ್ಲಿ ಹಣ್ಣು ಹಂಪ ಗಳನ್ನು ನಾರುಬೇರುಗಳನ್ನು ಅರಸಿ ಸಂಗ್ರಹಿಸು ವುದೇ ಅವಳ ಕಾಯಕ ಒಮ್ಮೆ ಅವಳ ಸಾಕು ಮಗ ರಾಮನು ಸಂಜೆಯಾದರೂ ಬಾರದಿರಲು ಅವನನ್ನು ಹುಡುಕುತ್ತಾ ಕಾಡಿಗೆ ಹೋದಳು ಅಲ್ಲಿ ಅವಳ ಮಗನ ಧ್ವನಿ ಕೇಳಿಸಿಯು ಅದನ್ನರ ಸುತ್ತಾ ಹೋಗಲು, ಅದು ಅವಳನ್ನು ಹುತ್ತದ ಬಳಿ ಕರೆತಂದಿತು ಹುತ್ತದಲ್ಲಿ ಬಗ್ಗಿ ನೋಡಲು ಸೀತಾ ಲಕ್ಷ್ಮಣ ಹನುಮತ್ಸಮೇತನಾದ ಶ್ರೀರಾಮನ ದಿವ್ಯ ಮಂಗಳ ವಿಗ್ರಹಗಳು ಕಂಡವು ಆನಂದದಿಂದ ಮೈ ಮರೆತಳವಳು ನಂತರ ಹುತ್ತವನ್ನು ಕೆದ ಪಲೊಪ್ಪದೇ ಗೋದಾವರಿ ನದಿಯಿಂದ ನೀರನ್ನು ತರಿಸಿ ಅದರ ಮೇಲೆ ಹೊಯ್ಯಲು ಅದು ಕರಗಿ ದೇವ ವಿಗ್ರಹಗಳು ಗೋಚರಿಸಿದವು

ಒಂದು ದಿನ ಋಷಿಯೊಬ್ಬನು ಪೋಕಾಲ ಧಮ್ಮಕ್ಕನ ಸ್ವಪ್ನದಲ್ಲಿ ಗೋಚರಿಸಿ ಮಹಾಭಕ್ತ ನೊಬ್ಬ ಬರುವತನಕ ಅವಳು ದೇವರನ್ನು ಸೇವಿ ಸುತ್ತಿರಬೇಕೆಂದು ತಿಳಿಸಿದ ಅಂತೆಯೇ ಬರುವ ಭಕ್ತರಾಮದಾಸರು (ಗೋಪನ) ಬರುವತನಕ ದೇವರನ್ನು ಪೂಜಿಸುತ್ತಿದ್ದಳು ಇಂದಿಗೂ ಹುಂಡಿ

ಬರೆದಾಗ ಧಮ್ಮಕ್ಕನ ಭಾಗವೆಂದು ಒಂದು ಭಾಗವನ್ನು ಅರ್ಚಕರಿಗೆ ಸಲ್ಲಿಸುತ್ತಾರೆ ಕಲ್ಯಾಣ ಮಂಟಪದಲ್ಲಿ ಧಮ್ಮಕ್ಕ ದೇವರಿಗೆ ನಿವೇದನವನ್ನು ಅರ್ಪಿಸುತ್ತಿರುವ ಚಿತ್ರವಿದೆ

ನೆಲಕೊಂಡಪಲ್ಲಿ ಎಂಬ ಊರಿನಲ್ಲಿ ಲಿಂಗಣ್ಣ ಮಂತ್ರಿಯ ಮಗನಾಗಿ, 1630 ರಲ್ಲಿ ಗೋಪಣ್ಣ ಜನಿಸಿದನು ಬಾಲ್ಯದಿಂದಲೂ ದೈವಭಕ್ತನಾದ ಅವನು ಸಂಸ್ಕೃತ ತೆಲುಗುಗಳಲ್ಲಿ ಪಾಂಡಿತ್ಯ ಪಡೆದಿದ್ದನು ನವಾಬ ಅಬ್ದುಲ್ ಹಸನ್ ತಾನಿಷಾನು ಇವನನ್ನು ಖಮ್ಮಂ ಜಿಲ್ಲೆಯ ಪೇಷ್ಕಾರನನ್ನಾಗಿ ನೇಮಿಸಿದನು ಗೋಪಣ್ಣ ತನ್ನ ಕರ್ತವ್ಯಗಳನ್ನು ಸಮರ್ಪಕವಾಗಿ ನಡೆಸುತ್ತಿದ್ದನು ಪೋಕಾಲ ಧಮ್ಮಕ್ಕ ಗೋಪಣ್ಣನ ಬಳಿಬಂದು ತನ್ನ ಸ್ವಪ್ನ ವೃತ್ತಾಂತವನ್ನು ತಿಳಿಸಿದಳು ಗೋಪಣ್ಣನಿಗೂ ಅದೇ ರೀತಿಯ ಸ್ವಪ್ನ ಬಿದ್ದುದರಿಂದ ತಕ್ಷಣವೇ ಭದ್ರಾಚಲಕ್ಕೆ ಹೊರಟು ಬಂದು ದೇವರದರ್ಶನ ಮಾಡಿ ಆನಂದ ತುಂದಿಲನಾದನು ದೇವರಿಗೆ ಸುಂದರ ದೇವಾಲಯವನ್ನು ಕಟ್ಟಿಸಲು ನಿರ್ಧರಿಸಿದನು ದೇವಾಲಯವನ್ನು ಕಟ್ಟಿಸಲು ಖಜಾನೆಯ ಹಣವನ್ನು ಬಳಸಲು ನವಾಬನಿಗೆ ಅನುಮತಿಯನ್ನು ಕೇಳಿ ಅನುಮತಿ ಪಡೆಯುವ ಮುಂಚೆಯೇ ದೇವಾಲಯವನ್ನು ಕಟ್ಟಿಸಲು ಪ್ರಾರಂಭಿಸಿದನು ಕಟ್ಟಡ ಪೂರ್ಣಗೊಂಡ ನಂತರ ಸುದರ್ಶನ ಚಕ್ರವನ್ನು ದೇವಾಲಯದ ಗೋಪುರದ ಮೇಲೆ ಸ್ಥಾಪಿಸಬೇಕಿತ್ತು ಅದು ಸಾಧ್ಯವಾಗದಿರಲು ಚಿಂತಿತನಾಗಿರಲು ರಾತ್ರಿ ದೇವರು ಸ್ವಪ್ನದಲ್ಲಿ ಗೋಚರಿಸಿ ಗೋದಾವರಿ ನದಿಯಲ್ಲಿ ಬೆಳಗ್ಗೆ ಸ್ನಾನ ಮಾಡಿದರೆ ಅವನಿಗೆ ಚಕ್ರ ದೊರಕುವುದಾಗಿ ಹೇಳಿದನು ಅಂತೆಯೇ ರಾಮದಾಸರು ಬೆಳಗ್ಗೆ ನದೀಸ್ನಾನಮಾಡುವಾಗ ಚಕ್ರ ದೊರೆಯಿತು ಅದನ್ನು ತಂದು ದೇವಸ್ಥಾನದ ಮೇಲ್ಭಾಗದಲ್ಲಿ ಸ್ಥಾಪಿಸಿದರು

ಅದಲ್ಲದೆ ದೇವರಿಗಾಗಿ ಬಹು ಮೌಲ್ಯದ ಅನೇಕ ಸುಂದರ ಆಭರಣಗಳನ್ನು ಮಾಡಿಸಿದರು ಇದಕ್ಕಾಗಿ ಖಜಾನೆಯ ಹಣವೆಲ್ಲ ವೆಚ್ಚವಾಗಿ ಹೋಯಿತು ಇದರಿಂದ ಕುಪಿತನಾದ ನವಾಬ ರಾಮದಾಸರನ್ನು ಗೋಲ್ಕೊಂಡದ ಸೆರೆಮನೆಯಲ್ಲಿರಿಸಿದನು ರಾಮದಾಸರು ಅಲ್ಲಿ ಹನ್ನೆರಡುವರ್ಷಗಳ ಕಾಲ ಕಷ್ಟವನ್ನನುಭವಿಸಿದರು ಆ ಸಮಯದಲ್ಲಿ ಅವರು ರಚಿಸಿದ ಸ್ತೋತ್ರಗೀತಗಳು ಭಕ್ತಿಭಾವದಿಂದಲೂ ದೀನ ದುಖದಿಂದಲೂ ಕೂಡಿ ಅನನ್ಯಸುಂದರವಾಗಿವೆ **ದಾಶರಥಿ ಶತಕಮ್** ಎಂಬ ನೂರು ಪದ್ಯಗಳ ಪುಸ್ತಕವೊಂದನ್ನು ರಚಿಸಿದರು ನಂತರ ಸೀತಾದೇವಿಯನ್ನು ಕರುಣೆಗಾಗಿ ಯಾಚಿಸಿದರು ಕಡೆಗೆ ಕೃಪೆದೋರಿ ರಾಮಲಕ್ಷ್ಮಣರು ವೇಷಧಾರಿಗಳಾಗಿ ತಾನಿಷ ನವಾಬನ ಬಳಿ ಬಂದು ಗೋಪಣ್ಣ ಕೊಡಬೇಕಾಗಿದ್ದ ದುಡ್ಡನ್ನು ನೀಡಿದರು ನವಾಬ ರಸೀತಿಯನ್ನಿತ್ತ ಈ ರಸೀತಿ ಗೋಪಣ್ಣನ ತಲೆದಿಂಬಿನ ಕೆಳಗೆ ಇಡಲ್ಪಟ್ಟಿತು ತಾನಿಷ ಬೆಳಗ್ಗೆ ಎಚ್ಚೆತ್ತ ತನ್ನ ಕನಸನ್ನು ನೆನೆದು, ಎದುರಿಗಿದ್ದ ಧನರಾಶಿಯನ್ನು ಕಂಡು ದಿಗ್ಭ್ರಾಂತನಾದ ತಕ್ಷಣವೆ ರಾಮದಾಸರನ್ನು ಮುಕ್ತರನ್ನಾಗಿಸಿ ದೇವರಿತ್ತ ಧನವನ್ನು ರಾಮದಾಸರಿಗೆ ಕೊಟ್ಟ ಅವರು ಅದನ್ನೆಲ್ಲ ಮತ್ತೆ ತಾನಿಷನಿಗೆ ಕೊಟ್ಟು ತಾವು ಎರಡು ವರಹಗಳನ್ನು ಮಾತ್ರವೇ ಇಟ್ಟುಕೊಂಡರು ಮುಂದೆ ತಾನಿಷ ರಾಮಭಕ್ತನಾಗಿ ಭದ್ರಾಚಲದಲ್ಲಿ ದೇವಾಲಯವನ್ನು ಕಟ್ಟಿಸಲೂ ಅದನ್ನು ನಿರ್ವಹಿಸಲು ದಾನ ದತ್ತಿಗಳನ್ನೂ ನೀಡಿದ ಇಂದಿಗೂ ರಾಮದಾಸರು ದೇವರಿಗೆ ಮಾಡಿಕೊಟ್ಟ ಚಿನ್ನದಾಭರಣಗಳನ್ನು ಸುಭದ್ರನಾಗಿ ಇಡಲಾಗಿದೆ ಅವುಗಳಿಂದ ಉತ್ಸವದಿನಗಳಲ್ಲಿ ದೇವರನ್ನು ಅಲಂಕರಿಸುತ್ತಾರೆ

ಗುಂಡೂರಿನ ಲಕ್ಷ್ಮೀನರಸಿಂಹ ದಾಸರು ಮತ್ತು



ಮದ್ರಾಸಿನ ಭದ್ರಗಿರಿ ವರದ ರಾಮದಾಸರು ಎಂಬ ಇಬ್ಬರು ಭಕ್ತರು 19ನೇ ಶತಮಾನದ ಆದಿ ಭಾಗದಲ್ಲಿ ತಮ್ಮ ಸರ್ವಸ್ವವನ್ನೂ ದೇವರಿಗಾಗಿ ಅರ್ಪಿಸಿ ದೇವಸ್ಥಾನದ ಅಭಿವೃದ್ಧಿಗಾಗಿ ಬಹುವಾಗಿ ಶ್ರಮಿಸಿದರು ಲಕ್ಷ್ಮೀ ನರಸಿಂಹದಾಸರು ದೇವರನ್ನು ಸ್ತುತಿಸಿ ಅನೇಕ ಕೀರ್ತನೆಗಳನ್ನು ರಚಿಸಿದ್ದು ಅವನ್ನು ಇಂದಿಗೂ ದೇವಸನ್ನಿಧಿಯಲ್ಲಿ ಹಾಡಲಾಗುತ್ತದೆ

ಭದ್ರಾಚಲ ಆಂಧ್ರ ಪ್ರದೇಶದ ಖಮ್ಮಂ ಜಿಲ್ಲೆಯಲ್ಲಿದೆ ಇಲ್ಲಿಗೆ ವಿಜಯವಾಡ ಹೈದರಾಬಾದ್ ರೈಲು ಮಾರ್ಗದಲ್ಲಿ ಡೋರ್ನಕಲ್ ಜಂಕ್ಷನ್‌ನಲ್ಲಿ ಳಿದು ಮುಂದೆ ಬಸ್‌ನಲ್ಲಿ ಪಯಣಿಸಬಹುದು ರಾಜಮಹೇಂದ್ರಿಯಿಂದ ಭದ್ರಾಚಲಕ್ಕೆ ಹೋಗುವ 60 ಮೈಲಿ ಹಾದಿ ಅರಣ್ಯ ಮಧ್ಯದಲ್ಲಿದ್ದು ಬಹಳ ರಮ್ಯವಾಗಿದೆ ವಿಜಯವಾಡ ತೆನಾಲಿ ಏಲೂರು ರಾಜಮಹೇಂದ್ರಿ ಹೈದರಾಬಾದ್ ವಾರಂಗಲ್ ಖಮ್ಮಂ ನಲ್ಲಗೊಂಡ ಇವುಗಳಿಂದಲೂ ರಸ್ತೆ ಮಾರ್ಗವಾಗಿ ಹೋಗಬಹುದು

ಭದ್ರಾಚಲದ ಊರಿನಲ್ಲಿ ದೇವಸ್ಥಾನವೇ ಕೇಂದ್ರ ಬಿಂದು ದೇವಸ್ಥಾನ ನೆಲದಿಂದ ಸ್ವಲ್ಪ ಉನ್ನತವಾದ ಪ್ರದೇಶದಲ್ಲಿ ಕಟ್ಟಲ್ಪಟ್ಟಿದೆ ಸುಮಾರು ನೂರು ಮೆಟ್ಟಿಲುಗಳನ್ನು ಹತ್ತಿಹೋದರೆ ಎತ್ತರವಾದ ವಿಸ್ತಾರವಾದ ಪ್ರದೇಶದಲ್ಲಿ ಕಟ್ಟಲ್ಪಟ್ಟಿರುವ ಸುಂದರ ದೇವಾಲಯದ ದರ್ಶನವಾಗುತ್ತದೆ ಮೆಟ್ಟಿಲುಗಳನ್ನು ಹತ್ತಿಹೋದ ತಕ್ಷಣವೇ ಆಂಜನೇಯನ ಸಣ್ಣದೊಂದು ದೇವಾಲಯವಿದೆ ಪಕ್ಕದಲ್ಲಿಯ ಎರಡು ಸ್ತಂಭಗಳಿವೆ ಆಂಜನೇಯನ ದೇವಾಲಯದ ಗೋಡೆಯ ಮೇಲೆ ಹನುಮಾನ್ ಚಾಲಿಸಾ ಬರೆದಿದ್ದಾರೆ ಬೃಹತ್ ಬಾಗಿಲಿನಿಂದ ಒಳಹೊಕ್ಕಾರೆ ಸುಂದರವಾದ ಮುಖಮಂಟಪವನ್ನು ಹೊಂದಿರುವ ದೇಗುಲ ಕುದುರೆ ಆನೆಗಳಿಂದ ಎಳೆಯಲ್ಪಟ್ಟ ಚಕ್ರಗಳಿಂದ ಕೂಡಿದ ರಥದ ಕಲ್ಪನೆಯಿದೆ ಪಕ್ಕದ ಬಾಗಿಲಿನಿಂದ ಒಳಹೊಕ್ಕರೆ ಗರ್ಭಗೃಹವಿದೆ ಅದಕ್ಕೆ ಬೆಳ್ಳಿಯ ಬಾಗಿಲಿದೆ ಒಂದು ಬದಿಯಲ್ಲಿ ಲಕ್ಷ್ಮೀದೇವಿಯ ದೇವಸ್ಥಾನವಿದೆ ಹಿಂದುಗಡೆ ಭದ್ರ ತಪಸ್ಸು ಮಾಡಿದ ಸ್ಥಳವಿದೆ

ಗರ್ಭಗೃಹದಲ್ಲಿ ಚತುರ್ಭುಜನಾದ ಎರಡು ಕೈಗಳಲ್ಲಿ ಶಂಖಚಕ್ರಗಳನ್ನು ಧರಿಸಿದ ಇನ್ನೆರಡು ಕೈಗಳಲ್ಲಿ ಬಿಲ್ಲುಬಾಣಗಳನ್ನು ಹಿಡಿದು ಎಡ ತೊಡೆಯ ಮೇಲೆ ದೇವಿ ಸೀತೆಯನ್ನು ಕುಳ್ಳಿರಿಸಿಕೊಂಡಿರುವ ಶ್ರೀರಾಮಚಂದ್ರನ ದಿವ್ಯ ಮಂಗಳ ಮೂರ್ತಿ ಪಕ್ಕದಲ್ಲಿ ಲಕ್ಷ್ಮಣ ನಿಂತಿದ್ದಾನೆ ಮೇಲೆ ನಾಗರಾಜ ಹೆಡೆಯೆತ್ತಿ ನೆರಳಾಗಿದ್ದಾನೆ ವಿಶೇಷವಾಗಿ ಅಲಂಕೃತಗೊಂಡ ಪ್ರಸನ್ನ ಮುಖಮುದ್ರೆಯ ಭಕ್ತಿಭಾವ ಪ್ರಚೋದಕ ಸೌಂದರ್ಯದಿಂದ ಕೂಡಿದ ಕರಿಯಕಲ್ಲಿನ ವಿಗ್ರಹಗಳು ಪರಮಭಕ್ತರನೇಕರಿಂದ ಪೂಜೆಗೊಂಡ ಮಹಿಮಾನ್ವಿತ ಮೂರ್ತಿಗಳು ನೋಡಿ ಕಣ್ ತನಿಯದು ಮನ ದಣಿಯದು

ದೇವಾಲಯದಲ್ಲಿ ಉಷಃಕಾಲದಲ್ಲಿ ಸುಪ್ರಭಾತಸೇವೆಯಿಂದ ರಾತ್ರಿ ಶಯನೋತ್ಸವದವರೆಗೂ ಸುಮಾರು ಹತ್ತಿವಿಧದ ಆರಾಧನೋತ್ಸವಗಳು ಜರುಗುತ್ತವೆ ಬೆಳಗ್ಗೆ ಐದುಗಂಟೆಗೆ ಸುಪ್ರಭಾತ ಸೇವೆ ಭದ್ರಗಿರಿ ರಘುವರ ಸುಪ್ರಭಾತವನ್ನು ಕೀರ್ತಿಸಿ ಮಂಗಳವಾದ್ಯಗಳೊಡನೆ ದೇವರಿಗೆ ಸುಪ್ರಭಾತ ಸೇವೆ ನಲ್ಲಿಸುತ್ತಾರೆ ನಂತರ ಶುಭ್ರಸ್ನಾತರಾದ ಅರ್ಚಕರು ಗೋದಾವರಿ ನದಿಯಿಂದ ಬೆಳ್ಳಿಯ ಕೊಡಗಳಲ್ಲಿ ದೇವರಿಗೆ ಅಭಿಷೇಕಕ್ಕಾಗಿ ನಿರ್ಮಲೋದಕವನ್ನು ತರುತ್ತಾರೆ 7 ಗಂಟೆಗೆ ಅಭಿಷೇಕ ಶ್ರೀರಾಮದಾಸರು ಗಂಗಾನದಿಯಿಂದ 54 ಸಾಲಿಗ್ರಾಮಗಳನ್ನು ತಂದು ಎರಡು ನಕ್ಷತ್ರ ಹಾರಗಳನ್ನು ಮಾಡಿಸಿದ್ದಾರೆ ಇದನ್ನು ಶ್ರೀರಾಮ ಲಕ್ಷ್ಮಣರಿಗೆ ಅಲಂಕರಿಸಿ ಅಭಿಷೇಕ ಮಾಡುತ್ತಾರೆ ನಂತರ ಅಲಂಕಾರ ಅರ್ಚನೆ



ಮಂಗಳಾರತಿಗಳು 10 ಗಂಟೆಯ ಹೊತ್ತಿಗೆ ಉತ್ಸವ ಮೂರ್ತಿಗೆ ಸಹಸ್ರನಾಮಾರ್ಚನೆ, ಕಲ್ಯಾಣೋತ್ಸವ ಪಟ್ಟಾಭಿಷೇಕಗಳು ಕ್ರಮವಾಗಿ ಜರಗುತ್ತವೆ ಬೆಳಗ್ಗೆ ಸರ್ವದರ್ಶನ ಉಂಟು ಸಾಯಂಕಾಲ ದೇವರಿಗೆ ದರ್ಬಾರ್ ಸೇವೆ ನಡೆಯುತ್ತದೆ ಉತ್ಸವ ಮೂರ್ತಿಗಳನ್ನು ಅಲಂಕೃತ ಪೀಠದ ಮೇಲೆ ಕುಳ್ಳಿರಿಸಿ ಗಾಯನಗಳಿಂದ ಸ್ತುತಿಸಿ ಮಂಗಳಾರತಿಗಳನ್ನು ಬೆಳಗಲಾಗುತ್ತದೆ ನಂತರ ಅಂದಿನ ಲೆಕ್ಕಪತ್ರಗಳನ್ನು ದೇವರ ಮುಂದೆ ಓದಲಾಗುತ್ತದೆ ರಾತ್ರಿ ಒಂಭತ್ತರ ವೇಳೆಗೆ ಉತ್ಸವ ಮೂರ್ತಿಗಳನ್ನು ಬೆಳ್ಳಿಯ ತೊಟ್ಟಿಲಿನಲ್ಲಿ ಮಲಗಿಸಿ ಪವಳಿಂಪು ಸೇವೆಯನ್ನು ಸಲ್ಲಿಸಲಾಗುತ್ತದೆ ದರ್ಬಾರ್ ಸೇವೆ ಮತ್ತು ಪರ್ಯಂಕೋತ್ಸವಗಳು ಈ ದೇವಾಲಯದ ಪ್ರತ್ಯೇಕತೆ

ಪ್ರತಿ ಶುಕ್ರವಾರ ಶೃಂಗಾರ ಸೇವೆ ನಡೆಯುತ್ತದೆ ಏಕಾದಶಿ ಪೂರ್ಣಿಮೆ ಪುನರ್ವಸು ನಕ್ಷತ್ರದ ದಿನಗಳಲ್ಲಿ ವಿಶೇಷ ಪೂಜೆಗಳಾಗುತ್ತವೆ ವೈಕುಂಠ ಏಕಾದಶಿ ಮತ್ತು ರಾಮನವಮಿ ಉತ್ಸವಗಳು ಬಹು ಸಂಭ್ರಮದಿಂದ ಆಚರಿಸಲ್ಪಡುತ್ತವೆ ಲಕ್ಷಾಂತರ ಜನ ನೆರೆದು ದೇವರ ದರ್ಶನ ಪಡೆದು ಕೃತಾರ್ಥರಾಗುತ್ತಾರೆ ಚೈತ್ರಮಾಸದಲ್ಲಿ ರಾಮ ನವಮಿ ಹಬ್ಬವು ಸುಮಾರು ಹದಿನೈದು ದಿನಗಳ ಕಾಲ, ಕಲ್ಯಾಣೋತ್ಸವ ಡೋಲೋತ್ಸವ ತೆಪ್ಪೋತ್ಸವ ಅವಭೃತ ಮುಂತಾಗಿ ವಿಜೃಂಭಣೆಯಿಂದ ನೆರವೇರುತ್ತದೆ ವೈಶಾಖ ಮಾಸದಲ್ಲಿ ಪುನರ್ವಸು ನಕ್ಷತ್ರದಂದು ಪರ್ಯಂಕೋತ್ಸವ ನಡೆಯುತ್ತದೆ ವಿಜಯ ದಶಮಿಯ ಸಾಯಂಕಾಲ ಶಮೀಪೂಜೆ ಕಾರ್ತೀಕ ಶುದ್ಧ ದ್ವಾದಶಿ, ಕ್ಷೀರಾಬ್ಧಿ ಮಥನ ದ್ವಾದಶಿ, ಆ ದಿನ ರಾತ್ರಿ ಶ್ರೀರಾಮನನ್ನು ಜಗನ್ಮೋಹಿನಿಯಾಗಿ ಅವತರಿಸಿ ಅಮೃತವನ್ನು ಹಂಚುವ ರೀತಿಯಲ್ಲಿ ಅಲಂಕರಿಸುತ್ತಾರೆ ವೈಕುಂಠ ಏಕಾದಶಿಯ ಮುಂಚಿನ ಹತ್ತು ದಿನಗಳಲ್ಲಿ ದಶಾವತಾರದ ಅಲಂಕಾರಗಳು ನಡೆಯುತ್ತವೆ ಹೀಗೆ ದೇವರಿಗೆ ನಿತ್ಯೋತ್ಸವ, ನಿತ್ಯ ಮಂಗಳಗಳು ನಡೆಯುತ್ತಲೇ ಇರುತ್ತವೆ

ಭದ್ರಾಚಲದ ಸುತ್ತಮುತ್ತಲು ಅನೇಕ ಪ್ರೇಕ್ಷಣೆಯ ಸ್ಥಳಗಳಿವೆ ಭದ್ರಾಚಲದಿಂದ ಸುಮಾರು 36 ಕಿ ಮೀ ದೂರದಲ್ಲಿ ಪರ್ಣಶಾಲೆ ಎಂಬ ಸ್ಥಳವಿದೆ ಇಲ್ಲಿ ಸೀತಾಲಕ್ಷ್ಮಣ ಸಮೇತನಾಗಿ ಶ್ರೀರಾಮನು ವಾಸಿಸುತ್ತಿದ್ದಾಗ, ಮಾರೀಚನು ಚಿನ್ನದ ಜಿಂಕೆಯಾಗಿ ಸುಳಿದ ಸ್ಥಳವಿದಂತೆ ಸೀತಾದೇವಿಯ, ಚಿನ್ನದ ಜಿಂಕೆಯ ಪಾದಚಿಹ್ನೆಗಳು ಇಂದಿಗೂ ದೇಗುಲದ ಪ್ರಾಂಗಣದಲ್ಲಿ ಕಾಣುತ್ತವೆ ಸೀತಾವಾಗು ಎಂಬ ಕಿರುಹೊಳೆ ಹತ್ತಿರದಲ್ಲೆ ಪ್ರವಹಿಸುತ್ತದೆ ಸೀತಾದೇವಿ ಸೀರೆಗಳನ್ನು ಒಣಹಾಕುತ್ತಿದ್ದ ಸ್ಥಳ ವರ್ಣರಂಜಿತವಾಗಿ ಕಾಣುತ್ತದೆ ಇಲ್ಲೊಂದು ಸಣ್ಣ ದೇವಾಲಯವಿದೆ ನದೀ ದಡದ ಇನ್ನೊಂದು ಭಾಗದಲ್ಲಿ ಎಂಡೆಗಳ ಮೇಲೆ ರಾವಣನ ರಥ ಚಕ್ರದ ಗುರುತುಗಳಿವೆ ಭದ್ರಾಚಲದ ಹತ್ತಿರದಲ್ಲೆ ಜಟಾಯು ವಾಸಿಸುತ್ತಿದ್ದ ಜಟಾಯುಪಾಕ ರಾಮನು ಖರದೂಷಣರೊಡನೆ ಯುದ್ಧ ಮಾಡಿದ ಸ್ಥಳಗಳಿವೆ ಭದ್ರಾಚಲದಿಂದ 5 ಕಿ ಮೀ ಗಳ ದೂರದಲ್ಲಿ ಗುಂದಾಲನಿಂಬ ಸ್ಥಳವಿದೆ ಇಲ್ಲಿ ಒಂದು ಜಾಗದಲ್ಲಿ ನದೀದಡದಲ್ಲಿ ಅಗೆದರೆ ಬಿಸಿನೀರು ಬರುತ್ತದೆ ಇಲ್ಲಿ ಚಳಿಗಾಲದಲ್ಲಿ ರಾಮಸೀತೆಯರು ಸ್ನಾನಮಾಡುತ್ತಿದ್ದರಂತೆ

ಭದ್ರಾಚಲದಲ್ಲೂ ಕೆಲವು ಸಂದರ್ಶಿಸಲೇಬೇಕಾದ ಸ್ಥಳಗಳಿವೆ ಕಲ್ಯಾಣ ಮಂಟಪ ಅವುಗಳಲ್ಲೊಂದು ದೇವಸ್ಥಾನಕ್ಕೆ ಸ್ವಲ್ಪ ದೂರದಲ್ಲಿ ಒಂದು ವಿಸ್ತಾರವಾದ ಪ್ರದೇಶದಲ್ಲಿ ಈ ಮಂಟಪ ನಿರ್ಮಿಸಲ್ಪಟ್ಟಿದೆ ಬಹುಸುಂದರವಾದ ಶಿಲ್ಪಗಳಿಂದ ಅಲಂಕೃತವಾಗಿದೆ ರಾಮ ಪಟ್ಟಾಭಿಷೇಕ, ಗೀತೋಪದೇಶ ದಶಾವತಾರ, ಕಲ್ಲಿನಲ್ಲಿ ಕೆತ್ತಿರುವ ಆನೆ ತೆನೆ, ಸರಪಳಿಗಳು ಬಹು ಸುಂದರವಾಗಿವೆ ವಿಶೇಷ ಗಾನ ಸಭೆಗಳನ್ನು ನಡೆಸಲೆಂದು ತಿರುಪತಿ ಛತ್ರದ ಬಳಿ ಧ್ಯಾನಮಂದಿರ ಒಂದನ್ನು ನಿರ್ಮಿಸಲಾಗಿದೆ

ಭದ್ರ ವೈಕುಂಠದಿಂದ ದೇವನನ್ನಿಲ್ಲಿಗೆ ಕರೆತಂದ ಧಮ್ಮಕ್ಕ ಎಲ್ಲರಿಗೂ ದೇವರ ದರ್ಶನ ದೊರೆಯುವಂತೆ ಮಾಡಿದಳು ರಾಮದಾಸರು ಅವನಿಗೆ ವೈಭವದ ದೇವಾಲಯವನ್ನು ಕಟ್ಟಿಸಿದರು ಗೀತಸ್ತೋತ್ರಗಳಿಂದ ಸ್ತುತಿಸಿದರು ಇಂದು ಭದ್ರಾಚಲ ಭಾರತದಲ್ಲಿಯೇ ಪ್ರಖ್ಯಾತವಾದ ಶ್ರೀರಾಮಕ್ಷೇತ್ರಗಳಲ್ಲೊಂದಾಗಿದೆ ರಾಮಭಕ್ತರು ಅನುದಿನವೂ ಸ್ಮರಿಸುವಂತಹ ಸಂದರ್ಶಿಸಲು ಹಂಬಲಿಸುವಂತಹ ಪುಣ್ಯಕ್ಷೇತ್ರವಾಗಿದೆ

ಭದ್ರಾಚಲ ನಿವಾಸಾಯ
ಭದ್ರಾಯ ಪರಮಾತ್ಮನೇ
ಜಾನಕೀ ಪ್ರಾಣನಾಥಾಯ
ರಾಮಚಂದ್ರಾಯ ಮಂಗಳಮ್ ||

*****



ಸಿರ್ಸಿಯಿಂದ ಕುಮಟಾಕ್ಕೆ ಬರುವಾಗ ಮಂಜು ಗುಣಿಗೆ ಹೋಗುವ ಮಾರ್ಗ ಸಿಗುತ್ತದೆ ಈ ರಸ್ತೆ ಹಿಡಿದು ಒಳಗಡೆ ಎರಡು ಮೈಲಿ ಹೋದರೆ ವೆಂಕಟೇಶ್ವರನು ನೆಲೆನಿಂತ ಮಂಜಗುಣಿ ಕ್ಷೇತ್ರ ಕಾಣುತ್ತದೆ ಗೋಕರ್ಣದ ಕೋಟಿತೀರ್ಥವನ್ನು ಹೋಲುವ ವಿಶಾಲವಾದ ಕೆರೆ ಅದರ ಮುಂದೆ ದೇವಾಲಯ ಎದುರಿಗೆ ಸುಂದರ ಮಾನಸ್ತಂಭ ಇರುವುದು ದಟ್ಟಡವಿಯಲ್ಲಿರುವ ಈ ಸುಂದರ ತಾಣವನ್ನು ನೋಡಿದಾಗ ವೆಂಕಟೇಶ್ವರನು ಇಲ್ಲಿಗೇಕೆ ಬಂದು ನೆಲೆಸಿದನೆಂದು ಅರಿವಾಗುವುದು

## ವೆಂಕಟೇಶನ ಆಗಮನ

ಲೋಕಗಳನ್ನು ರಕ್ಷಿಸುವುದಕ್ಕೂ ಭಕ್ತರಿಗೆ ಅನುಗ್ರಹ ಮಾಡುವುದಕ್ಕೂ ದುಷ್ಟ ಮೃಗಗಳನ್ನು ಸಂಹಾರ ಮಾಡುವುದಕ್ಕೂ ಹೆಸರುವಾಸಿಯಾದ ಶ್ರೀ ವೆಂಕಟೇಶನು ತನ್ನ ಪರಿವಾರಗಳೊಡನೆ ಶಂಖ – ಚಕ್ರ ಮೊದಲಾದ ಆಯುಧಗಳ ಸಹಿತ ಸಂಚಾರಕ್ಕೆ ಹೊರಟನು ಸಂಚರಿಸುತ್ತ ಕಂಕರ್ಹ ಎಂಬ ಕೊಳವನ್ನು ನೋಡಿ ಅಲ್ಲಿಯ ವನಶೋಭೆಗೆ ಮರುಳಾಗಿ ಅಲ್ಲಿಯ ದಂಡೆಯ ಮೇಲೆ ವಿಶ್ರಮಿಸಿದನು ಈ ಸ್ಥಳ ಶ್ರೀಸ್ಥಳ ಎಂದು ಪ್ರಸಿದ್ಧವಾಗಿದೆ ವೆಂಕಟೇಶ್ವರನು ಅಲ್ಲಿಯೇ ನಿಂತು ದಿನ ಕಳೆಯುತ್ತಿರಲು ತಿರ್ಮಲನೆಂಬ ಹೆಸರಿನ ಮುನಿಯು ತೀರ್ಥಯಾತ್ರೆಗಳನ್ನು ಮಾಡುತ್ತ ಕಂಕರ್ಹದ ಹತ್ತಿರದ ಸೌಂದರ್ಯಕ್ಕೆ ಮನಸೋತು ಅಲ್ಲಿಯೇ ವಾಸಿಸತೊಡಗಿದನು ಅಲ್ಲಿಯೇ ನಿಂತು ವೆಂಕಟೇಶ್ವರನನ್ನು ಧ್ಯಾನಿಸುತ್ತಿರಲು ಅಶರೀರವಾಣಿಯಾಯಿತು "ಶ್ರೀ ವೆಂಕಟೇಶ್ವರನು ಈ ಕೊಳದ ದಂಡೆಯಲ್ಲಿರುವ ಶಿಲೆಯ ಮೇಲೆ ಮಲಗಿರುವನು ಅವನನ್ನು ತೆಗೆದುಕೊಂಡು ಹೋಗು ಇಲ್ಲಿಂದ ಉತ್ತರಕ್ಕೆ ಸುಮಾರು ಆರು ಮೈಲಿ ದೂರ ಇರುವ ಮಂಜುಗುಣಿ ಎಂಬ ಸ್ಥಳದಲ್ಲಿ ಮನೋಹರವಾದ ಅಶೋಕ ವೃಕ್ಷ ಇರುವುದು ಅದರ ಸಮೀಪದಲ್ಲಿರುವ ವಲ್ಮೀಕವನ್ನು ಅಗೆದು ಆ ಸ್ಥಳವನ್ನು ಸ್ವಚ್ಛಮಾಡಿ ಶಿಲಾಮಯವಾದ ದೇವಾಲಯವನ್ನು ಕಟ್ಟಿಸು ಅದೇ ಜಾಗದ ಈಶಾನ್ಯ ಭಾಗದಲ್ಲಿರುವ ಕೋಣಾರಿ ಎಂಬ ತೀರ್ಥದಲ್ಲಿ ವಸು ಎಂಬ ವೈಶ್ಯ ಪುತ್ರನಿಂದ ಇಡಲ್ಪಟ್ಟ ದ್ರವ್ಯವನ್ನು ಇದಕ್ಕಾಗಿ ಉಪಯೋಗಿಸು" ಎಂದಂತಾಯಿತು ಈ ಮಾತುಗಳನ್ನು ಕೇಳಿ ತಿರ್ಮಲನಿಗೆ ಆಶ್ಚರ್ಯವಾಯಿತು

## ಮೂರ್ತಿ ಸ್ಥಾಪನೆ

ದೇವರ ಅಪೇಕ್ಷೆಯಂತೆ ಅವನು ಸೂಚಿಸಿದ ಸ್ಥಳದಲ್ಲಿ ಚೈತ್ರ ಶುದ್ಧ ಹದಿನಾಲ್ಕರಲ್ಲಿ

# ಮಂಜುಗುಣಿ

ಎಂ ಆರ್ ಶಾನಭಾಗ

ಸೂರ್ಯನು ಮೇಷದಲ್ಲಿರುವಾಗ ಮೂರ್ತಿಸ್ಥಾಪನೆ ಮಾಡಿದನು ಕೋಣಾರಿ ತೀರ್ಥದಲ್ಲಿ ವಸು ಎಂಬ ವಣಿಕ ಪುತ್ರನಿಂದ ನಿಕ್ಷಿಪ್ತವಾದ ಧನವನ್ನು ತೆಗೆದುಕೊಂಡು ಕೇವಲ ಶಿಲೆಯಿಂದಲೇ ಗರ್ಭಗುಡಿಯನ್ನು ಕಟ್ಟಿಸಿದನು ವಿಧಿವತ್ತಾದ ಎಲ್ಲ ಕಾರ್ಯವನ್ನು ಮುಗಿಸಿ ವೆಂಕಟೇಶನನ್ನು ತೃಪ್ತಿಪಡಿಸಿದನು ವಸಂತ ಮಹೋತ್ಸವವನ್ನು ಮಾಡಿಸಿದನು ಕ್ಷೇತ್ರದ ಗಡಿಯಲ್ಲಿ ಇತರ ದೇವಾಲಯಗಳನ್ನು ರಚಿಸಿ ದೇವತೆಗಳನ್ನು ಸ್ಥಾಪಿಸಿದನು ಹೀಗೆ ನೈರುತ್ಯ ದಿಕ್ಕಿನಲ್ಲಿ ಮಹಿಷಾಸುರ ಮರ್ದಿನಿಯನ್ನೂ ವಾಯುವ್ಯದಿಕ್ಕಿನಲ್ಲಿ ಚಂಡಿಕಾ ನದಿಯ ದಂಡೆಯಲ್ಲಿ ಭೈರವನನ್ನೂ ಈಶಾನ್ಯದಲ್ಲಿ ಪಂಚಲಿಂಗವನ್ನೂ ಆಗ್ನೇಯದಲ್ಲಿ ಪಾರ್ವತಿ-ಗಣಪತಿಯರನ್ನೂ ಸ್ಥಾಪಿಸಿದನು ಇಲ್ಲಿಯ ಪ್ರತಿಯೊಂದು ತೀರ್ಥಗಳು ತಮ್ಮದೇ ಆದ ಪುರಾಣ ವಿಶೇಷತೆಯನ್ನು ಪಡೆದಿವೆ

## ರಾಜ ಮನೆತನದ ಆಶ್ರಯ

ಸಿರ್ಸಿ ಸೀಮೆಯಲ್ಲಿ ರಾಜ್ಯವಾಳಿ ಧರ್ಮ, ಶಿಲ್ಪ ಕುಸುರಿ ಕೆಲಸಗಳ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸಿದವರೆಂದರೆ ಕದಂಬ, ಕೆಳದಿ ಸಾಳವ ಸೋದೆ ಈ ಮೊದಲಾದ ರಾಜಮನೆತನದವರೇ ಸರಿ ಈ ದೇವಾಲಯಕ್ಕೆ ಈ ಎಲ್ಲಾ ಮನೆತನದವರ ಆಶ್ರಯವಿತ್ತೆಂದು ಹೇಳಬಹುದು ಕದಂಬರ ಮಯೂರ ವರ್ಮ ಕೃಷ್ಣ ವರ್ಮ ಕೀರ್ತಿವರ್ಮರು ಈ ದೇವಾಲಯಕ್ಕೆ ದಾನ ನೀಡಿದ ಶಾಸನಗಳ ಬಗ್ಗೆ ಹೇಳಲಾಗುತ್ತದೆ ಇಲ್ಲಿ ಭವ್ಯವಾದ ರಥ ಭಿತ್ತಿಗಳ ಮೇಲೆ ಕದಂಬರ ಲಾಂಛನಗಳಾದ ಕಪಿ ಸಿಂಹ ವೃಷಭಗಳು ಕಂಡುಬರುತ್ತವೆ ಕೆಳದಿನಾಯಕರ ಕಾಲದಲ್ಲಿ ವೈಷ್ಣವ ದೇವಾಲಯಗಳು ಅಷ್ಟೊಂದು ಉಚ್ಛ್ರಾಯಸ್ಥಿತಿಯನ್ನು ಕಾಣದಿದ್ದರೂ ಸಂಗೀತಪುರ ಮತ್ತು ಗೇರುಸೊಪ್ಪೆಯಿಂದ



ರಾಜ್ಯವಾಳಿದ ನಾಳವ ಮನೆತನದವರು ಶಿಲ್ಪದಲ್ಲಿ ಸ್ವತ ಆಸಕ್ತಿ ಇದ್ದವರಲ್ಲದೇ ಧಾರ್ಮಿಕ ಕಾರ್ಯವನ್ನು ಕೈಗೊಂಡಿದ್ದರು ೧೬ ನೇ ಶತಮಾನದವರೆಗೆ ರಾಜ್ಯವಾಳಿದ ಸೋದೆಯ ಅರಸರು ಧರ್ಮ ಶಿಲ್ಪ ಕುಸುರಿನ ಕೆಲಸ ಸಾಹಿಂಗಳಿಗೆ ಹೆಚ್ಚಿನ ಪ್ರೋತ್ಸಾಹ ನೀಡಿದರು ಈ ದೇವಾಲಯದಲ್ಲಿನ ಹಲವು ಕೆತ್ತನೆಯ ಕುಸುರಿನ ಕೆಲಸ ಅವರದೇ ಎಂದು ಹೇಳಲಾಗಿದೆ



## ಸೂಕ್ಷ್ಮ ಕಲೆ

ಸೋದೆಯ ರಾಜ ಮನೆತನದಲ್ಲಿ ಅರಸಪ್ಪ ನಾಯಕನು ವಾದಿರಾಜ ಸ್ವಾಮಿಯವರ ಶಿಷ್ಯತ್ವ ಸ್ವೀಕರಿಸಿದ್ದನು ನಂತರ ಎರಡನೆ ಯ ರಾಮಚಂದ್ರ ನಾಯಕ ರಾಜ್ಯವಾಳಿದನು ಅವರು ವೈಷ್ಣವ ಸಂಪ್ರದಾಯದವರಾಗಿದ್ದರಿಂದ ಶ್ರೀ ವೆಂಕಟೇಶ್ವರ ದೇವಾಲಯದ ಜೀರ್ಣೋದ್ಧಾರ ಮಾಡಿಸಿದ್ದೇ ಅಲ್ಲದೇ ಹೆಚ್ಚಿನ ಆಸ್ತಿ ಧನಸಹಾಯ ನೀಡಿದ ಬಗ್ಗೆ ಶಾಸನಗಳು ದೊರೆತಿವೆ ದೇವಾಲಯದ ಹೆಚ್ಚಿನ ಕೆತ್ತನೆಗಳು ವಿಷ್ಣುವಿನ ಹಲವು ರೂಪ ಅವತಾರ ಸಂದರ್ಭಗಳನ್ನೇ ನೀಡುತ್ತವೆ ಇದರ ಜೊತೆಗೆ ರಾಮಾಯಣದ ಹಲವು ಸನ್ನಿವೇಶಗಳನ್ನು ಕಾಣುವೆವು ವಿಶೇಷತ ರಾಮ - ರಾವಣರ ಯುದ್ಧವನ್ನೇ ಹೆಚ್ಚಿನ ಕಡೆಯಲ್ಲಿ ತೆಗೆದುಕೊಳ್ಳಲಾಗಿದೆ ದೇವಾಲಯವು ಭವ್ಯವಾಗಿದ್ದು ಗರ್ಭಗುಡಿಯ ಸುತ್ತಲೂ ಕಲ್ಲಿನ ಗೋಡೆಗಳಿವೆ ಗೋಡೆಗಳ ಕಂಭಗಳ ಮೇಲಿನ ಶಿಲ್ಪ ಶ್ರೀಮಂತಿಕೆಯ ಅದ್ಭುತ ಮಟ್ಟಕ್ಕೇರಿದೆ ಚಿತ್ರಗಳನ್ನು ಮೂಡಿಸುವಲ್ಲಿ ಪೌರಾಣಿಕ ಕಥಾಭಾಗಗಳನ್ನು ತೆಗೆದುಕೊಂಡರೂ ಕಾಮಸೂತ್ರದಿಂದ ಆಯ್ದು ಚಿತ್ರಿಸಿದಂತೆ ತೋರುವ ಪ್ರಣಯ ಭಂಗಿಗಳನ್ನು ಇಲ್ಲಿಯ ಶಿಲ್ಪ ಒಳಗೊಂಡಿದೆ ಭಂಗಿಗಳನ್ನು ಮೂಡಿಸುವಾಗ ಶಿಲ್ಪಿ ಅತಿಸೂಕ್ಷ್ಮವಾದ ವಿವರಗಳನ್ನು ಗಮನದಲ್ಲಿಟ್ಟುಕೊಂಡಿದ್ದಾನೆ ಕೇವಲ ಕಾಮಸೂತ್ರವಲ್ಲದೆ ಜೀವನದ ಇತರ ಕ್ರಿಯೆಗಳಿಗೂ ಅಷ್ಟೇ ಪ್ರಾಶಸ್ತ್ಯ ನೀಡಲಾಗಿದೆ ಅಂಗನೆಯರ ವರ್ಣಮಯ ಚಿತ್ರಗಳು, ಶಿಲಾಬಾಲಿಕೆಯರು, ಮದನಿಕೆಯರ ವಿವಿಧ ಭಂಗಿಗಳು, ಅವರು ಧರಿಸಿರುವ ಆಭರಣಗಳು ಮುಖದಲ್ಲಿ ಹೊಮ್ಮುತ್ತಿರುವ ಭಾವನೆಗಳು - ಈ ಮೊದಲಾದವುಗಳನ್ನು ಒಳಗೊಂಡ ಶಿಲ್ಪಗಳು ಕಲಾಸಾಮರ್ಥ್ಯದ ಪ್ರತೀಕದಂತಿದ್ದು ಬೇಲೂರು ಹಳೇಬೀಡಿನ ಶಿಲಾಬಾಲಿಕೆಯರನ್ನು ನೆನಪಿಸುತ್ತವೆ



ಇಲ್ಲಿ ಇರುವಂಥ ಭವ್ಯವಾದ ರಥ ಬೇರೆಡೆಯಲ್ಲಿ ವಿರಳ ಇದರಲ್ಲಿಯ ಚಿತ್ರಗಳ ಕೊರೆತ ಮತ್ತು ಕುಸುರಿನ ಕೆಲಸ ಅಷ್ಟೇ ಶ್ರೀಮಂತ ಹಲವು ಸಣ್ಣ ರಥಗಳನ್ನು ಇತರ ದಿನಗಳಲ್ಲಿ ಎಳೆಯಲಾಗುತ್ತದೆ ದೇವಾಲಯದ ಮುಂದಿರುವ ಮಾನಸ್ತಂಭವೂ ಸುಂದರ ಕೆತ್ತನೆಯಿಂದಲೇ ಕೂಡಿದೆ ದೇವಾಲಯದ ಮುಂದೆ ಮುಖಮಂಟಪವಿದ್ದು ಇದರಲ್ಲಿರುವ ಕಂಭಗಳ ಕೆತ್ತನೆಯು ಬಹಳ ಸುಂದರವಾಗಿದೆ

## ಉತ್ಸವಗಳು

ದಶಮಿ - ದ್ವಾದಶಿಗಳಲ್ಲಿ ಸಾಮಾನ್ಯ ಉತ್ಸವ ನಡೆದರೆ ಹುಣ್ಣಿಮೆ - ಅಮವಾಸ್ಯೆಗಳಲ್ಲಿ ವಿಶೇಷ ಉತ್ಸವಗಳು ನಡೆಯುವವು ಕಾರ್ತೀಕ ತ್ರಿಪುರಿ ಹುಣ್ಣಿಮೆಯ ದಿನ ದೊಡ್ಡ ದೀಪೋತ್ಸವ ಚೈತ್ರ ಮಾಸದಲ್ಲಿ ೧೫ ರಂದು ಮಹಾರಥೋತ್ಸವವಿರುವುದು ರಥೋತ್ಸವಕ್ಕೆ ಹೋದವರು ಬರುವಾಗ ಕಬ್ಬನ್ನು ತಿನ್ನುತ್ತಾ ಬರುವದು ವಾಡಿಕೆ ಹೀಗಾಗಿ ಮಂಜಗುಣಿ ಹಬ್ಬವು ಕಬ್ಬಿನ ಹಬ್ಬವೆಂದು ಹೆಸರುವಾಸಿ

ಯುವಕರೇ ದೇಶದ ಬೆನ್ನೆಲುಬು ದೇಶದ ಪ್ರಗತಿ ಉನ್ನತಿ ಇವರಿಂದಲೇ ಸಾಧ್ಯ ದೇಶದ ಸಂಪತ್ತಾದ ಯುವಜನತೆಯ ವಿವೇಕವನ್ನೇ ದೇಶದ ಪ್ರಗತಿ ಅವಲಂಬಿಸಿದೆ ಸ್ವಾಮಿ ವಿವೇಕಾನಂದರು ಹೆಜ್ಜೆ ಹೆಜ್ಜೆಗೂ ಯುವಕರ ಪಾತ್ರದ ಮಹತ್ವವನ್ನು ಸಾರಿಸಾರಿ ಹೇಳಿದ್ದಾರೆ "ದೃಢಕಾಯರೂ ಧೈರ್ಯಶಾಲಿಗಳೂ ವಿವೇಕಿಗಳೂ ಆದ ಯುವಕರನ್ನು ಯಾವ ದೇಶ ಹೊಂದಿದೆಯೋ ಅದರ ಸರ್ವತೋಮುಖ ಅಭಿವೃದ್ಧಿಯ ಬಗೆಗೆ ಯಾವ ವಿಧವಾದ ಸಂದೇಹವೂ ಬೇಡ '

ಯುವ ಪೀಳಿಗೆಯನ್ನೇ ದೇಶ ಅವಲಂಬಿಸಿರುವುದರಿಂದ ಯುವಕರು ಜವಾಬ್ದಾರಿ ಅರಿತು ನಡೆಯಬೇಕಾಗಿರುವುದು ಅವರ ಆದ್ಯ ಕರ್ತವ್ಯ ಚಿಕ್ಕಂದಿನಲ್ಲಿ ತಂದೆತಾಯಿಯರು ಅವರಿಗೆ ಸರಿಯಾದ ಮಾರ್ಗದರ್ಶನವನ್ನು ನೀಡಬೇಕು ಸರಿ ಮತ್ತು ತಪ್ಪಿನ ವಿವೇಚನೆ ಮತ್ತು ವಿಮರ್ಶೆ ಅವರದಾಗಿರಬೇಕು ಶಾಸ್ತ್ರಗ್ರಂಥಗಳಲ್ಲಿನ ಹೇಳಿಕೆಯಂತೆ ಪ್ರಾಪ್ತೇತು ಷೋಡಶೇ ವರ್ಷೇ ಪುತ್ರಂ ಮಿತ್ರವದಾಚರೇತ್ ಹದಿನಾರರ ಹರೆಯದ ಪುತ್ರನನ್ನು ಮಿತ್ರನಂತೆ ಭಾವಿಸಿ ಅವನೊಡನೆ ವ್ಯವಹರಿಸಬೇಕು ಇಲ್ಲಿ ತಂದೆತಾಯಿಯರ ಜವಾಬ್ದಾರಿಗಿಂತ ಯುವಕನ ಜವಾಬ್ದಾರಿ ಹಿರಿಯದಾಗುತ್ತದೆ ಹದಿನಾರರ ಹರೆಯದ ಯುವಕನಿಗೆ ವಿವೇಕ ಬಹಳ ಆವಶ್ಯಕವಾಗುತ್ತದೆ ಇಲ್ಲಿ ಸತ್‌ಸಂಗತಿಯ ಪಾತ್ರ ಹಿರಿದಾದುದು ಮಿತ್ರರನ್ನು ಚುನಾಯಿಸುವುದರಲ್ಲಿ ಅವನು ಎಚ್ಚರಿಕೆಯಿಂದ ಇರಬೇಕು ಇಲ್ಲಿ ಎಡವಿದನೆಂದರೆ ಜೀವಮಾನಪರ್ಯಂತ ಅವನು ಪಶ್ಚಾತ್ತಾಪ ಪಡಬೇಕಾಗುತ್ತದೆ

ಸಜ್ಜನರ ಸಹವಾಸ ಯುವಕನ ಸರ್ವತೋಮುಖ ಅಭಿವೃದ್ಧಿಗೆ ದಾರಿದೀಪವಾಗುತ್ತದೆ ಇನ್ನೂ ಪೂರ್ಣವಾಗಿ ಬಲಿಯದ ದೇಹ ಮತ್ತು ಮನಸ್ಸಿನ ದೃಢತೆಗೆ ಇದು ಸಂಜೀವನಿಯಾಗುವುದೆ ಸತ್ಸಹವಾಸದಿಂದ ದುಷ್ಟಮಾರ್ಗಕ್ಕೆ ಬಲಿಯಾಗದೆ ಸನ್ಮಾರ್ಗದಲ್ಲಿ ಮನಸ್ಸು ಪ್ರವರ್ತಿಸುವುದೆ ಸ್ವಸ್ಥ ಮನಸ್ಸಿನಿಂದ ಕೂಡಿದ ಸ್ವಸ್ಥಶರೀರವುಳ್ಳ ಯುವಕನಿಗೆ ಅಸಾಧ್ಯವಾದದ್ದು ಯಾವುದೂ ಇಲ್ಲ ಅವನ ಯುಕ್ತಾಯುಕ್ತ ವಿವೇಚನೆ ಕೇವಲ ಅವನ ಪ್ರಗತಿಗಷ್ಟೇ ಅಲ್ಲ ದೇಶದ ಪ್ರಗತಿಗೂ ಮುಕ್ತ ಸಾಧನವಾಗುತ್ತದೆ

ಇಂದಿನ ಮಾನವ ಜೀವನ ಕ್ಲಿಷ್ಟವೂ ಜಟಿಲವೂ ಮತ್ತು ದುರ್ಭರವೂ ಆಗಿದೆ ಈ ಕ್ಲಿಷ್ಟತೆ ಮತ್ತು ಜಟಿಲತೆಗಳನ್ನು ಹೋಗಲಾಡಿಸಲು ಯುವಕರೇ ಶಕ್ತರು ಬೇರಾರಿಂದಲೂ ಇದು ಸಾಧ್ಯವಲ್ಲ

## ಯುವವಾಣಿ

ಇಂದಿನ ಯುವಪೀಳಿಗೆ ಸಹಸ್ರಾಕ್ಷನಾಗಬೇಕು ಕೇವಲ ಎರಡು ಕಣ್ಣುಗಳನ್ನು ತೆರೆದಿಟ್ಟುಕೊಂಡಿದ್ದರೆ ಸಾಲದು ಸಾವಿರ ಕಣ್ಣುಗಳಿಂದ ಎಲ್ಲದಿಕ್ಕುಗಳಲ್ಲೂ ಜಾಗರೂಕತೆಯಿಂದ ದೃಷ್ಟಿಹರಿಸಿ ತನಗೂ ಮತ್ತು ದೇಶಕ್ಕೂ ಯಾವುದು ಹಿತವೋ ಅದನ್ನು ತೆಗೆದುಕೊಂಡು ಅಹಿತವನ್ನು ದೂರಸರಿಸುವುದರಲ್ಲಿಯೇ ಅದರ ವಿವೇಕ ಅಡಗಿದೆ

ನಮ್ಮ ಭಾರತದೇಶದಲ್ಲಿ ಸತ್ಯ ಅಹಿಂಸೆ ಅಸ್ತೇಯ ಬ್ರಹ್ಮಚರ್ಯವನ್ನು ಅನುಸರಿಸಿಕೊಂಡು ಬಂದ ಯುವಕರು ಅಸಾಧ್ಯವನ್ನು ಸಾಧಿಸಿ ತೋರಿಸಿದ ಅದೆಷ್ಟೋ ಪ್ರಸಂಗಗಳಿವೆ ಇಂದಿನ ನಮ್ಮ ಭಾರತೀಯರು ವಿವೇಕವನ್ನು ಕಳೆದುಕೊಂಡು ದುಷ್ಟ ಸಹವಾಸಕ್ಕೆ ಬಿದ್ದು, ತಮ್ಮ ಮತ್ತು ದೇಶದ ನಾಶ ಮಾಡಿಕೊಳ್ಳುವುದು ಸೂಕ್ತವಲ್ಲ

# ಸತ್ಸಂಗತಿ

ಡಾ ಎ ಜಾನಕಿ

ಇದು ವಿಜ್ಞಾನಯುಗ ಹಿಂದಿನ ಯುಗದಂತೆ ಇಂದಿನ ಯುವಕನಿಗೆ ಕುಳಿತುಕೊಂಡು ಸಾವಧಾನವಾಗಿ ಯೋಚಿಸಲು ಸಮಯವಿಲ್ಲ ನಿಜ, ಆದರೆ ಹಿಂದೆಂದೂ ಕಾಣಬರದ ಬುದ್ಧಿಶಕ್ತಿಯ ಆಗರ ಅವನಾಗಿದ್ದಾನೆ ಸಮೂಹ ಮಾಧ್ಯಮಗಳು ಅವನನ್ನು ಸಂಪೂರ್ಣ ವಿಶ್ವಕ್ಕೆ ತೆರೆದಿಟ್ಟಿವೆ ಭಿನ್ನ ಭಿನ್ನ ದೇಶಗಳ ನಾಗರಿಕತೆ ಸಂಸ್ಕೃತಿ ಮತ್ತು ಪರಂಪರೆಗಳನ್ನು ನೋಡಿ, ತಿಳಿದ ನಮ್ಮ ಭಾರತೀಯ ಯುವಕ ಬಹಳ ವಿವೇಚನೆಯಿಂದ ಹೆಜ್ಜೆ ಇಡಬೇಕಾಗುತ್ತದೆ ನಮ್ಮ ಸಂಸ್ಕೃತಿಯ ರಕ್ಷಣೆಗೆ ಅವನೇ ಹಿರಿಯ ಜಾಗರೂಕ ವ್ಯಕ್ತಿಯಾಗಿದ್ದಾನೆ

ಇಂಥದ ಸಂದರ್ಭದಲ್ಲಿ ಅವನ ಆಯ್ಕೆಗೆ ಅವನ ಸಂಗತಿ ಕಾರಣವಾಗುತ್ತದೆ ಒಳ್ಳೆಯ ಸಂಗತಿ ಅವನಿಗೆ ದೊರಕಿದರೆ ಹಂಸಕ್ಷೀರ ನ್ಯಾಯದಂತೆ ಹಾಲನ್ನು ತೆಗೆದುಕೊಂಡು ನೀರನ್ನು ಬಿಡುವ ಶಕ್ತಿ ಅವನಿಗೆ ಒದಗಿ ಬರುತ್ತದೆ

ನನ್ನ ಒಬ್ಬ ಮಿತ್ರರು ಅವರ ಮಗುವಿನ ಬಗೆಗೆ ಮಾತನಾಡುತ್ತಾ ಬಹಳ ಕಳಕಳಿಯಿಂದ ಈ ಮಾತನ್ನಾಡಿದರು ನೋಡಿ ನೀವು ಏನೇ ಹೇಳಿ ಎಸ್ ಎಸ್ ಎಲ್ ಸಿ ವರೆಗೆ ಮಕ್ಕಳನ್ನು ನಾವು ವಶದಲ್ಲಿಟ್ಟುಕೊಂಡು ಸರಿಯಾದ ಮಾರ್ಗದರ್ಶನ ಮಾಡಬಹುದು ಆದರೆ ಮುಂದೆ ಅವರ ಸಂಪೂರ್ಣ ಭವಿಷ್ಯ ಅವರು ಯಾವ ಸಂಗತಿಯನ್ನು ಆರಿಸಿಕೊಳ್ಳುತ್ತಾರೋ ಅದನ್ನೇ ಅವಲಂಬಿಸಿದೆ ಈ ಮಾತು ನೂರಕ್ಕೆ ನೂರರಷ್ಟು ಸತ್ಯ ಅವರು ಒಬ್ಬ ಅಧ್ಯಾಪಕರು ಅಧ್ಯಾಪಕರಾಗಿ ಆ ಮಾತನ್ನು ಆಡಿದ್ದಾರೆ ನಮ್ಮಗಳ ಅನುಭವದಲ್ಲಿ ಬಂದಿರುವುದೂ ಇದೇ ಆದ್ದರಿಂದ ಯುವಕರು ಸಂಗತಿಯನ್ನು ಆರಿಸುವಲ್ಲಿ ಬಹಳ ಎಚ್ಚರಿಕೆ ವಹಿಸಬೇಕು

ಖಲಸಖ್ಯಂ ಪ್ರಾಙ್ಮಧುರಂ
ವಯೋಽಂತರಾಲೇ ನಿದಾಘದಿನಮಂತೇ
ಏಕಾದಿ ಮಧ್ಯಪರಿಣತಿ
ರಮಣೀಯಾ ಸಾಧುಜನಮೈತ್ರೀ ||

– ಸಮಯೋಚಿತ ಪದ್ಯಮಾಲಿಕೆ

ದುರ್ಜನಸಂಗ ಆರಂಭದಲ್ಲಿ ಮಧುರ ವಯಸ್ಸು ನಡುವೆ ತಾರುಣ್ಯದಲ್ಲಿ ಮಧುರ ಬೇಸಿಗೆ ದಿನ ಕಡೆಯಲ್ಲಿ – ಸಂಜೆ ಮಧುರ ಸಜ್ಜನರ ಸಂಗವು ಆರಂಭ ನಡುವೆ – ಕಡೆಯಲ್ಲಿಯೂ ಒಂದೇ ರೀತಿ ಮಧುರ

ನೂನಂ ದುಗ್ಧಾಬ್ಧಿಮಂಥೋ
ತ್ಥಾವಿಮೌ ಸುಜನದುರ್ಜನೌ
ಕಿಂತ್ವಿಂದೋಃ ಸೋದರ ಪೂರ್ವ
ಕಾಲಕೂಟಸ್ಯ ಚೇತರ ||

– ಸುಭಾಷಿತ ರತ್ನ ಭಾಂಡಾಗಾರ

ಒಳ್ಳೆಯವರು ಕೆಟ್ಟವರು ಇವರಿಬ್ಬರೂ ಕ್ಷೀರ ಸಮುದ್ರವನ್ನು ಕಡೆಯುವಾಗ ಹುಟ್ಟಿದವರೇ ಹೌದು ಆದರೆ ಸಜ್ಜನರು ಚಂದ್ರನ ಸಹೋದರರು ಕೆಟ್ಟವರು ಕಾಲಕೂಟವಿಷಕ್ಕೆ ಸೋದರರು

ಕಾಲಾಂತರೇ ಹ್ಯನರ್ಥಾಯ
ಗೃಧ್ರೋ ಗೇಹೋಪರಿ ಸ್ಥಿತ
ಖಲೋ ಗೃಹಸಮೀಪಸ್ಥ
ಸದ್ಯೋಽನರ್ಥಾಯ ದೇಹಿನಾಮ್ ||

ಕಲಿವಿಡಂಬನ–74

ಮನೆಯ ಮೇಲೆ ಹದ್ದು ಕುಳಿತರೆ ಕಾಲಾಂತರದಲ್ಲಿ ಕೆಡಕು ಸಂಭವಿಸಬಹುದು – ದುಷ್ಟನು ಮನೆಯ ಹತ್ತಿರವಿದ್ದರೆ ಸಾಕು ಕೂಡಲೇ ಕೆಡಕು ಸಂಭವಿಸುತ್ತದೆ

ದೇಶದ ಬೆನ್ನೆಲುಬಾಗಿರುವ ಯುವಕರು ತಮ್ಮ ವಿವೇಚನಾಶಕ್ತಿಯನ್ನು ಉಪಯೋಗಿಸಿಕೊಂಡು ಕೆಟ್ಟವರ ಸಹವಾಸಕ್ಕೆ ಬಲಿ ಆಗದೆ ತಮ್ಮನ್ನು ಕಾಪಾಡಿಕೊಂಡು ದೇಶದ ಪ್ರಗತಿಗೆ ಕಾರಣಕರ್ತರಾಗುವುದು ಅವರ ಆದ್ಯಕರ್ತವ್ಯ *

ಸಂದರ್ಶಿಸಿ ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ ಹಿರಿಮೆ ವರಂವರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುವತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುವತಿಗಳಲ್ಲಿ ವುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ

ತಿರುಮಲೆಯ ಸಾವಿರ ಕಂಬದ ಸಭಾಂಗಣದಲ್ಲಿ ತಿರುವತಿ ತಿರುಮಲೆಗಳ ವರಿಸರದಲ್ಲಿ ದೊರೆತ ಎಲ್ಲ ವುರಾವಸ್ತುಗಳನ್ನು ಮಾನವ ಶಾಸ್ತ್ರ ಪ್ರಾಕ್ ವಸ್ತುಗಳನ್ನೂ ನೆಲ, ನಾಣ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ ಇಲ್ಲಿ ಅವರೂವದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ ತಿ ತಿ ದೇ ಮತ್ತಿತರ ಕಡೆಗಳಲ್ಲಿ ದೊರೆತ ಆಯುದಗಳೂ ಪ್ರದರ್ಶಿತವಾಗಿವೆ ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್ ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿ ನಮ್ಮಾಳ್ವಾರ್ ದೇವಾಲಯದ ವೆರಿಯಾಳ್ವಾರ್ ಮಂಟವದಲ್ಲಿ ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ ಇದರ ಹಲವು ವಿಭಾಗಗಳೆಂದರೆ-

ವೈಷ್ಣವತೆಯ ಉಗಮ ವಿಕಾಸ ವಾಸುದೇವ-ವೃಷ್ಣಿಕುಂಜ ನಿಂದ ಆರಂಭವಾದ ಈ ವೈಷ್ಣವ ಧರ್ಮ ಇಂದು ಇನ್ನೂರಕ್ಕೂ ಮಿಗಿಲಾಗಿ ಉವಶಾಖೆಗಳಾಗಿ ಭಾರತದಲ್ಲೆಲ್ಲ ಹರಡಿದೆ ದಕ್ಷಿಣ ಭಾರತದಲ್ಲಿನ ವೈಷ್ಣವ ಧರ್ಮ ವೈಖಾನಸ ಹಾಗೂ ವಾಂಚರಾತ್ರಾಗಮಗಳಿಂದ ವಿಶೇಷ ಪ್ರಭಾವಿತವಾದದ್ದನ್ನು ಶಿಲ್ಪಗಳ ಚಿತ್ರಗಳನ್ನು ತೋರಿಸಿ ಅವುಗಳ ಬಹಿರಂಗ ಅರ್ಥವನ್ನೂ ಗೂಢಾರ್ಥವನ್ನೂ ವಿವರಿಸಲಾಗಿದೆ ಈ ವಿಭಾಗದಲ್ಲಿ ೧೧ನೇ ಶತಮಾನದ ವಿಶಿಷ್ಟ ವಿಗ್ರಹಗಳಿದ್ದು ಅವುಗಳನ್ನು ನಾಗುಲಾವುರಂ ದೇವಾಲಯದಿಂದ ಸಂಗ್ರಹಿಸಲಾಗಿದೆ

ವಾಸ್ತುಶಾಸ್ತ್ರ ಈ ವಿಬಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು ಸೂಕ್ತ ವಿವರ ವಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ

ಶಿಲ್ಪಶಾಸ್ತ್ರ ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾವೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ

ವಿಗ್ರಹಗಳು ವಿಷ್ಣುವಿನ ಹಲವಾರು ರೂಪಗಳ ಭಂಗಿಗಳೂ, ಆಭರಣಗಳೂ ವ್ಯಾವೃತವಾಗಿವೆ

ಆಳ್ವಾರ್‌ಗಳು ವಿಶಿಷ್ಟಾದ್ವೈತ ತತ್ವದ ಪ್ರವರ್ತಿ ಮಾರ್ಗಕ್ಕೆ ಆಳ್ವಾರರ ಸಂದೇಶಗಳೇ ಆಧಾರ ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು

ಸಮಯಾಚಾರಗಳು ಸನಾತನದ ದರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ವರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುವತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ವರಿಚಯವನ್ನು ನೀಡಲಾಗಿದೆ

ಕರೆ ಹರಿದಾಸರ ಹಿರಿಮೆಯನ್ನೂ, ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ ವಿಷ್ಣು ಶಕ್ತಿ, ಷಣ್ಮುಖ, ಮೊದಲಾದ ೮ನೇ ಶತಕದ ವಿಗ್ರಹಗಳಿಂದ ಆರಂಬವಾದ ಸಂಗ್ರಹ ಆಕರ್ಷಕವಾಗಿದೆ ಇಶೇ ರಾಜರಾಜನ ಕುಂತ್ರವಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ

**ವರಂವರೆಯ ವರಿಚಯ ಹೊಂದಿರಿ ಒಮ್ಮೆ ಬೇಟಿ ನೀಡಿರಿ**

---

**ಕಾಲ ಬೆಳಗ್ಗೆ ೮ ರಿಂದ**
**ರಾತ್ರಿ ೮.**

**ಟಿಕೆಟ್ ರೂ ೧-೦೦ (ಹಿರಿಯರಿಗೆ)**
**" " ೦-೫೦ (ಕಿರಿಯರಿಗೆ)**

ಸುಮಾರು ಹನ್ನೆರಡನೇ ಶತಮಾನದ ಅಂತ್ಯ ಕಾಲದ ಹರಿಹರ ಕವಿಯ ಗಿರಿಜಾ ಕಲ್ಯಾಣದ ಐದನೇ ಆಶ್ವಾಸದ 'ವಿರೂಪಾಕ್ಷದರ್ಶನ ಪುಷ್ಪಾಪಚಯ ಪೂಜಾವರ್ಣನಂ ಎಂಬ ವಿಭಾಗದಲ್ಲಿ – ನಾರದ ಮುನಿಯ ಮಾತಿನಂತೆ ಉಮೆಯನ್ನು ಹೇಮಕೂಟದ ವಿರೂಪಾಕ್ಷನಲ್ಲಿಗೆ ಕರೆತಂದಾಗ ಅವಳ ನಡಿಗೆಯ ವರ್ಣನೆ ಮಾಡುತ್ತಾ ಕವಿ ಹೊನ್ನ ಹಾವುಗೆಯ ರತ್ನವೆಳಗಂ ಕೀಳ್ಮಾಡಿ ನಕ್ಷತ್ರಮಾಲೆಯಂತೆ ನುಣ್ಪೆಳಗಸೀವ ಪದನಖ ಪ್ರಭೆ ಪೂವಲಿಗೆದರೆ ಮಂಜೀರದ ಮಧುರ ಧ್ವನಿಗೆ ಮಂಡಳಿಸುವ ಹೊನ್ನಹಾವುಗೆಗಳ ಬೆಳಕನ್ನು ಕೀಳ್ಮಾಡಿ ನುಣ್ಪೆಳಗನ್ನು ಚೆಲ್ಲುವ ಕಾಲ ಉಗುರ ಕಾಂತಿ ರಂಗೋಲಿ ಚಿತ್ರ ತೆಗೆಯಲು (ಪು 205) ಇಲ್ಲಿ ಪಾರ್ವತಿಯು ಪರಮೇಶ್ವರನಲ್ಲಿ ಎಷ್ಟು ತನ್ಮಯಳಾಗಿದ್ದಾಳೆಂದು ಕವಿ ತಿಳಿಸುತ್ತಾ ಅವಳು ನಡೆಯುವಾಗಲೂ ಅವಳ ಕಾಲುಗುರಿನ ಕಾಂತಿ ರಂಗೋಲಿಯನ್ನು ಕೆದರಿಸಿತು ರತ್ನಖಚಿತ ಪಾದುಕೆಗಳ ಬೆಳಕನ್ನು ಕಡೆಗಣಿಸಿ ನಕ್ಷತ್ರ ಮಾಲೆಯಂತೆ ಕಾಲುಗುರ ಪ್ರಭೆ ರಂಗೋಲಿ ಚಿತ್ರ ಬರೆದು ಪರಮಾತ್ಮನ ಸೇವೆಗೈಯ್ಯುತ್ತಿತ್ತೆನ್ನುವನು



ಸುಮಾರು ಹದಿಮೂರನೇ ಶತಮಾನದ ಲಕ್ಷ್ಮೀಶನ ಪಾರ್ಥಕ ಷಟ್ಪದಿಕಾವ್ಯ ಜೈಮಿನಿ ಭಾರತದ ಹದಿನೇಳನೇ ಸಂಧಿಯ ಬಬ್ರುವಾಹನನ ಓಲಗದ ಸಂಭ್ರಮದ ವರ್ಣನೆಯಲ್ಲಿನ ಉಲ್ಲೇಖವನ್ನು ಗಮನಿಸಬಹುದು ಅರ್ಜುನನು ಬೆಂಗಾವಲಾಗಿದ್ದ ಧರ್ಮರಾಜನ ಯಜ್ಞಾಶ್ವವು ಮಣಿಪುರದ ಬಬ್ರುವಾಹನನ ರಾಜ್ಯಕ್ಕೆ ಬರುತ್ತದೆ ಆಗವನ ಸಭಾಮಂಟಪದ ವರ್ಣನೆಯ ಭಾಗ ಹೀಗಿದೆ–

ಓಲಗಕೆ ಬಂದ ನೃಪಕೋಟೀರ ಪ್ರ
ಭಾಲಹರಿಹರಿದುಮುಸುಕಿಸಿತು ತತ್ಸಭಾಮಣಿ
ಜ್ವಾಲೆಗಳ ನಿಕರಮಂ, ಕರಮಂ ಮುಗಿವ
ಭಟರ ಸಂಘ ಸಂಘರ್ಷಣದೊಳು ||

ತೇಲಿ ಕವಡಿದ ಕಂಠಮಾಲೆಗಳ ಗಳಿತ ಮು
ಕ್ತಾಳಿಗಳಗಲಕೆ ಪರಿದೆಸೆವ ಮುತ್ತಿನ ರಂಗ
ವಾಲಿಗಳ ನಿಕ್ಕಿದರು ದರ್ಶನೋತ್ಸವ ಕೆಂಬ
ತೆರನಾದುದಾ ಸ್ಥಳದೊಳು ||

ಮುತ್ತಿನ ರಂಗವಲ್ಲಿಗಳಿಂದಲೂ ರಂಜಿಸುತ್ತಿದೆಯೆಂಬುದು ಅವನ ವೈಭವ ಐಶ್ವರ್ಯ, ಕಲಾಶ್ರಯಗಳನ್ನು ತಿಳಿಸುತ್ತದೆ

ಸುಮಾರು ಹದಿನಾಲ್ಕನೇ ಶತಮಾನದ ಅಂತ್ಯ ಭಾಗದ ಭೀಮಕವಿಯ ಬಸವ ಪುರಾಣವೆಂಬ ಭಾಮಿನಿ ಷಟ್ಪದಿ ಕಾವ್ಯದಲ್ಲಿ ರಂಗೋಲಿ ಕುರಿತ ಹಲವು ಉಲ್ಲೇಖಗಳು ಸಿಗುತ್ತವೆ ಕಬಡಿ ಸಂಗಮೇಶ್ವರದಲ್ಲಿ ಗುರುಲಿಂಗಕ್ಕೆ ನಮಿಸಲು ಹೊರಟಾಗ ಅಲ್ಲಿಯ ಸ್ತ್ರೀಯರ ಪಾತಿವ್ರತ್ಯ ಆಚಾರ ವಿಚಾರ ಪರಿಶುದ್ಧತೆ – ಇವೆಲ್ಲವುಗಳ ಜೊತೆಗೆ ಅಲ್ಲಿಯ ಕೇರಿಗಳು ರಂಗೋಲಿಗಳಿಂದ ಕೂಡಿ ಸುಂದರ ವೇದಿಕೆಗಳಾಗಿದ್ದವು ಎನ್ನುತ್ತಾನೆ ಕವಿ ಈ ಕೃತಿಯ ಒಂದನೇ ಕಾಂಡದ ನಾಲ್ಕನೇ ಸಂಧಿಯ ಐವತ್ನಾಲ್ಕನೆಯ ಪದ್ಯ ಬಸವೇಶ್ವರ ವಿವಾಹ ವಿಸ್ತಾರದ ಕತೆಯಲ್ಲಿ–

ನಾರಿಯರು ಸರ್ಬರು ಪತಿವ್ರತ
ಚಾರಿಯರು ನುಡಿಗಡಣ ತತ್ಪವಿ
ಚಾರ ಭಾಷೆಗಳುಲಿವು ತೂರ್ಯತ್ರಯದ
ಘೋಷಣವು |
ಕೇರಿಗಳು ತಾ ರಂಗವಾಲಿಯ
ಚಾರು ವೇದಿಕೆಗಳು ಬಗೆಪೊಡಾ
ಪೂರ ನೆಲ ನವಮುಕ್ತಿನಿಧಿಯ
ಸಮಾನವಾಗಿಕ್ಕು

ಪತಿವ್ರತಾಚಾರಿ ಸ್ತ್ರೀಯರು ತತ್ವ ವಿಚಾರಗಳನ್ನೇ ಮಾತನಾಡುವವರು ವೇಣು ವೀಣೆ ಮತ್ತು ಮೃದಂಗಗಳ ನಿನಾದ ಅಲ್ಲಿ ಪಸರಿಸಿತ್ತು ಕೇರಿಗಳೆಲ್ಲ ರಂಗೋಲಿಗಳಿಂದ ತುಂಬಿದ ಸುಂದರ ವೇದಿಕೆಗಳಾಗಿ ಆ ಭೂಮಿ ಮುಕ್ತಿಯ ಸ್ವರ್ಗದಂತಿತ್ತು

ಆರನೆಯ ಸಂಧಿ ಇಪ್ಪತ್ತನೇ ಪದ್ಯ ಹೀಗಿದೆ–

ಎಡೆ ಎಡೆಯೊಳೀ ಗಡಣೆಯಿಂದೆಡೆ
ವಿಡದೆ ನಡೆವುತ್ತಿರಲು ಪೊಡವಿಯೊ
ಗ್ಗುಡಿಸಿತೆನೆ ಮೃಡಭಕ್ತ ಗಣತತಿ
ತಂಡ ತಂಡದಲಿ
ಸಡಗರ ದೊಳೆಯ್ತರೆ ಮೃಗ ಮದದ
ಘಡು ಸಮಾರ್ಜನೆ ಮಾರ್ಗದೊಳು ಬೆಡ
ಗಡರಿ ಮುಕ್ತಾಫಳ ಸಮುಜ್ವಲ
ರಂಗವಾಳಿಗಳ

ಶಿವಶರಣರು ಸಾಗುವಾಗ ಶಿವಗಣ ಸಮೂಹವೇ ಈ ನೆಲದಲ್ಲಿ ಒಂದಾಗಿದ್ದಾರೋ ಎಂಬಂತಾಗಲು ಆ ಮಾರ್ಗದಲ್ಲಿ ಕಸ್ತೂರಿ ಮೂದಲಾದ ಮೃಗಗಳ ಆರು ಬಗೆಯ ಪರಿಮಳ ವಿಶೇಷವು ಪಸರಿಸಲು ಮುತಿನ ರಂಗವಲ್ಲಿಗಳ ಪ್ರಕಾಶವು ಅಲ್ಲಿಯ ಸೌಂದರ್ಯವನ್ನು ನಿರ್ಮಾಡಿಸಿತು ಈ

# ತಿರುಮಲೆ ತಿರುಪತಿ ದೇವಸ್ಥಾನಗಳು,
## ತಿರುಪತಿ

# ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ ತಿ ದೇವಸ್ಥಾನಗಳು ಶಿಲಾವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿದೆ

ಶಿಲಾವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು ಇದಕ್ಕಾಗಿ ಅರ್ಜಿಗಳನ್ನು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿಗಳಿಗೆ ಕಳುಹಿಸಬೇಕು ಜೊತೆಗೇ ದೇವಾಲಯದ ನಕ್ಷೆ ಅಸಿಸ್ಟೆಂಟ್ ಕಮಿಷನರ್‌ಗಿಂತ ಕಡಮೆಯವರಲ್ಲದ ಸ್ಥಳೀಯ ದೇವಾದಾಯ ಇಲಾಖಾಧಿಕಾರಿಗಳಿಂದ ಪ್ರಮಾಣಪತ್ರವನ್ನು ಕಳುಹಿಸಬೇಕು

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ಶಿಲಾ ಪಂಚಲೋಹ ವಿಗ್ರಹಗಳನ್ನೂ 50 ಶತಾಂಶ ರಿಯಾಯಿತಿಯಲ್ಲಿ ಒದಗಿಸಲಾಗುವುದು ಇದಕ್ಕಾಗಿಯೂ ಅರ್ಜಿಗಳನ್ನು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು ಜೊತೆಗೇ ದೇವಾಲಯದ ನಕ್ಷೆ ಅಸಿಸ್ಟೆಂಟ್ ಕಮಿಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು ಹಣದ ಸಂದಾಯವಾದ ನಂತರವೇ ವಿಗ್ರಹಗಳ ತಯಾರಿಕೆಯ ಕೆಲಸವನ್ನು ಕೈಗೆತ್ತಿಕೊಳ್ಳಲಾಗುವುದು

ತಿರುಪತಿಯಿಂದ ವಿಗ್ರಹಗಳನ್ನು ಪಡೆದು ತಮ್ಮ ಸ್ಥಳಗಳಿಗೆ ಸಾಗಿಸುವ ಹೊಣೆ ಆಯಾ ಅಭ್ಯರ್ಥಿಗಳಿಗೇ ಸೇರಿದ್ದು

ಕಾಲದಿಂದ ಕಾಲಕ್ಕೆ ತಿ ತಿ ದೇ ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತುಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು

ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ-

**ಕಾರ್ಯನಿರ್ವಹಣಾಧಿಕಾರಿ, ತಿ ತಿ ದೇ ತಿರುಪತಿ-517 501**

# ತಿರುಪತಿಯಲ್ಲಿ ವಸತಿಗಾಗಿ ಸೂಚನೆ

ತಿರುಪತಿಯಲ್ಲಿ ವಸತಿಗಾಗಿ ಮುಂಗಡ ಕಾಯ್ದಿರಿಸುವಿಕೆಗಾಗಿ ಯಾತ್ರಿಕರು ಹಣವನ್ನು ಎಂ ಓ ಮೂಲಕ ಕಳುಹಿಸುವುದನ್ನು ಸ್ವೀಕರಿಸಲಾಗುವುದಿಲ್ಲ ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ರಿಸೆಪ್ಷನ್) ತಿ ತಿ ದೇ ತಿರುಪತಿ ಅಥವಾ ಎಕ್ಸಿಕ್ಯೂಟಿವ್ ಆಫೀಸರ್ ತಿ ತಿ ದೇ ತಿರುಪತಿ ಇವರ ಹೆಸರಿನಲ್ಲಿ ಡಿ ಡಿ ಯನ್ನು ಕಳುಹಿಸಬೇಕು ಡಿ ಡಿ ಯ ಜೊತೆಗೆ ಬರುವ ದಿನಾಂಕ, ಬರುವವರ ಸಂಖ್ಯೆ ತಿರುಪತಿಯಲ್ಲಿ ವಸತಿಯನ್ನು ಕಾಯ್ದಿರಿಸಬೇಕಾದ ದಿನಾಂಕಗಳನ್ನು ಬರೆದು ಕಳುಹಿಸಬೇಕು

**ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್**
(ರಿಸೆಪ್ಷನ್) ತಿ ತಿ ದೇ ತಿರುಪತಿ

ಪದ್ಯದಲ್ಲಿ ರಂಗೋಲಿಗೇ ಪ್ರಧಾನ ಸ್ಥಾನ ನೀಡಲಾಗಿದೆ ಅಲ್ಲಿಯ ವೈಭವ ಮಿಗಿಲಾದುದು ಅಲ್ಲಿಯ ರಂಗೋಲಿಗಳಿಂದ

ಎಂಟನೇ ಸಂಧಿಯ ಇಪ್ಪತ್ತನೆಯ ಪದ್ಯ ಬಂದಿಕಾರರನ್ನು ಭಕ್ತರನ್ನಾಗಿ ಮಾಡಿದ ಕತೆಯ ಭಾಗ ಹೀಗಿದೆ–

ಸಂಗಮೇಶಾರ್ಪಿತದ ತೈಲಾ
ಭ್ಯಂಗನಂ ಮಾಡುವ ಸಮಯದಲಿ
ಜಂಗಮಯ್ಯನು ಬಂದು ಮುತ್ತಿನ
ಚೂರ್ಣವೀ ದಿನಕೆ ।
ಹಿಂಗದೊಕ್ಕಳ ನಿತ್ಯ ನೇಮದ
ರಂಗವಾಲಿಗೆ ಸಲಿಸ ಬೇಕಾ
ವಂಗ ದಿಂದೋಸರಿಸಬಾರದು
ನಿಮಿಷ ಮಾತ್ರದಲಿ

ನಿತ್ಯದ ರಂಗೋಲಿಗಳನ್ನು ಬರೆಯಲು ಮುತ್ತಿನ ಚೂರ್ಣವನ್ನು ಕೊಡುವ ಪರಿಪಾಠವಿರುವುದು ತಿಳಿದು ಬರುತ್ತದೆ

ಹನ್ನೊಂದನೆಯ ಸಂಧಿ ಹದಿಮೂರನೇ ಪದ್ಯ ಮುಗ್ಧಸಂಗಯ್ಯನ ಕತೆಯಲ್ಲಿನ ಭಾಗ–

ಸಂಗಡಿಪ ಶಶಿಕಾಂತ ಸೋಪಾ
ನಂಗಳಿಂ ಪಸು ಕುಟ್ಟಿ ಮಂಗಳ
ತುಂಗ ಹರ್ಮ್ಯ ಸ್ಥಳದ ಕಸ್ತೂರಿಕೆಯ
ಚಳೆಯದಲಿ ।
ಮಂಗಳೋದಯಪೆತ್ತ ಮುತ್ತಿನ
ರಂಗವಾಲಿಗಳಿಂದೆ ಕಂಗೆ ಸು
ರಂಗವೆನಿಸಿದ ಕಂಬಗಟ್ಟಿನ
ಮೇಲು ಕಟ್ಟಿಗಳಿಂ

ಅಲ್ಲಿನ ವೇಶ್ಯಾಸ್ತ್ರೀಯರ ಮನೆಗಳಲ್ಲಿಯೂ ಮಂಗಳೋತ್ಕರವೆನಿಸುವ ರಂಗೋಲಿಗಳನ್ನು ಕಸ್ತೂರಿಯ ಪರಿಮಳದ ಹಿನ್ನೆಲೆಯಲ್ಲಿ ಮುತ್ತಿನಿಂದ ರಚಿಸುತ್ತಿದ್ದರು

ಹದಿನೆಂಟನೇ ಸಂಧಿ ತೊಂಬತ್ತನೇ ಪದ್ಯ ಸಕಳೇಶ ಮಾದರಸರ ಕತೆಯೆಂಬ ಭಾಗದಲ್ಲಿ ನಿತ್ಯವೂ ದೇವಾಲಯದಲ್ಲಿ ರಂಗೋಲಿಗಳನ್ನು ಬಿಡಿಸಲಾಗುತ್ತಿತ್ತು ಎಂಬುದನ್ನು ತಿಳಿಸುತ್ತದೆ–

ಎಸೆವ ಲಿಂಗಾಂಗಣಕ್ಕೆ ಸಮ್ಮಾ
ರ್ಜಿಸುವ ಕಿರುವಳೆ ಲಿಂಗಭವನ ದೊ
ಳೊಸೆದು ಸಾಂಗದಿ ರಂಗವಾಲಿಯನಿಕ್ಕಿ
ನಡೆತಪ್ಪ ।

ಹೊಸ ಪರಿಯ ಸಸ್ಯಂಗಳುಂ ಬಂ
ದ ಸಮ ಲಿಂಗಕೆ ಮಜ್ಜನಂ ಮಾ
ಡಿಸುವ ಬಹು ತೀರ್ಥಂಗಳಂ
ವಿಭ್ರಾಜಿಸಲು ನಿಚ್ಚ

ಕ್ರಿಶ 1500 ನೇ ಶತಮಾನದ ಕುಮಾರವಾಲ್ಮೀಕಿಯ ನಡುಗನ್ನಡ ಭಾಷೆಯ ಭಾಮಿನಿ ಷಟ್ಪದಿಯ ತೊರವೆ ರಾಮಾಯಣದಲ್ಲಿ ರಂಗೋಲಿಯ ಕುರಿತ ಹಲವು ಸೊಗಸಾದ ಉಲ್ಲೇಖಗಳು ದೊರೆಯುತ್ತವೆ ಈ ಕೃತಿಯ ಬಾಲಕಾಂಡದ ಹದಿಮೂರನೇ ಸಂಧಿ 5ನೇ ಪದ್ಯ ಹೀಗಿದೆ–

ಹೊರೆದ ಕತ್ತುರಿ ಸಾರಣಯ ನವ
ಪರಿಮಳದ ಪನ್ನೀರ ಚಳೆಯದ
ಪರಿಸರದ ಕುಂಕುಮದ
ನಿಡುಗಾರಣೆಯ ಕರ್ಪುರದ

ಪರಿಪರಿಯ ಕಡೆಸಾಲ ಪರಿಪಿ
ಸ್ತರದ ಧೂಪದ ಧೂಮಗಂಧೋ
ತ್ಕರ ಸಮುದ್ರದೊಳದ್ದನೊಲ್ಲದೆ
ಪದವ ಪವಮಾನ

ಕಸ್ತೂರಿಯಿಂದ ಸಾರಿಸಿ ಪರಿಮಳದ ಪನ್ನೀರನ್ನು ಚಿಮುಕಿಸಲಾಗಿತ್ತು ಕುಂಕುಮದ ಪಟ್ಟೆಗಳಿಂದ ಕಾರಣೆ ಹಿಡಿಯಲಾಗಿತ್ತು ಕರ್ಪೂರದ ಬಗೆ ಬಗೆಯ ರಂಗೋಲಿಗಳು ತುಂಬಿದ್ದವು ವಾಯುವು ತನ್ನ ಮಾರ್ಗಬಿಟ್ಟು ಈ ಸುಗಂಧ ಸಾಗರದಲ್ಲಿ ಮುಳುಗಿದನು ! ಎಂಥ ಸೊಗಸಾದ ವರ್ಣನೆ ಇಲ್ಲಿ ಕರ್ಪೂರದಿಂದ ರಂಗೋಲಿ ಬಿಡಿಸುವುದನ್ನು - ರಂಗೋಲಿಗೆ ಕಡೆಸಾಲ ಎಂಬ ಪದವನ್ನು ಪರ್ಯಾಯವಾಗಿ ಉಪಯೋಗಿಸಿರುವುದು, ಗಮನೀಯ ಈ ಪದ್ಯವು ಸೀತೆಯ ವಿವಾಹ ಸಂದರ್ಭದಲ್ಲಿ ತಂದೆ ಜನಕ ಮಹಾರಾಜನು ತನ್ನ ರಾಜಧಾನಿ ಮಿಥಿಲಾ ಪಟ್ಟಣವನ್ನು ಒಪ್ಪಗೊಳಿಸಿದ ರೀತಿಯ ಕವಿ ವರ್ಣನೆ

ಬೀದಿ ಬೀದಿಗಳೊಳಗೆ ಕತ್ತುರಿ
ಸಾದುಗಳ ಸಾರಣೆಯ ಪರಿಮಳ
ಮೇಧಿಸಿದ ಪನ್ನೀರ ಚಳೆಯದ
ಚಾರು ಕುಂಕುಮದ |
ಶೋಧಿಸಿದ ಕಾರಣೆಯ ಕಡವಲಿ
ಗೈದ ಪೊಸ ಮುತ್ತುಗಳ ಪಡಿಸಣ
ಗೈದ ಧೂಪದ ಧೂಮ
ಪವನನಲೆಸೆದುದಾ ನಗರ'

ಬೀದಿ ಬೀದಿಗಳಲ್ಲಿ ಕಸ್ತೂರಿ ಮತ್ತು ಸಾದುಗಳಿಂದ ಸಾರಿಸಿ ಪರಿಮಳದ ಪನ್ನೀರನ್ನು ಚಿಮುಕಿಸಿದರು ಶೋಧಿಸಿದ ಕುಂಕುಮದಿಂದ ಕಾರಣೆಯನ್ನೆಳೆದರು (ಕಾರಣೆ-ಗೋಡೆಯ ಕೆಳಭಾಗದಲ್ಲಿ ಬಳಿಯುವ ಬಣ್ಣದ ಗೆರೆ) ಹೊಸ ಮುತ್ತುಗಳ ರಂಗೋಲಿ ಹಾಕಿದರು ವ್ಯಾಪಕವಾಗಿ ಹಾಕಿದ ಧೂಪದ ಹೊಗೆಯು ನಗರವನ್ನೆಲ್ಲ ವ್ಯಾಪಿಸಿತು ಈ ಪದ್ಯವು ಅಯೋಧ್ಯಾಕಾಂಡದ ಒಂದನೇ ಸಂಧಿಯ ಹದಿನಾರನೇ ಪದ್ಯ ಶ್ರೀರಾಮಚಂದ್ರನಿಗೆ ಪಟ್ಟ ಕಟ್ಟುವ ಸಂದರ್ಭದಲ್ಲಿ ಅಯೋಧ್ಯಾನಗರದ ಅಲಂಕಾರವನ್ನಿದು ತಿಳಿಸುತ್ತದೆ ರಂಗೋಲಿ ಬರೆಯುತ್ತಿದ್ದ ವಿಧಾನ ಇಲ್ಲಿ ಗಮನೀಯ

ಕ್ರಿಶ 1655 ರ ಸುಮಾರಿನ ಷಡಕ್ಷರದೇವನ ಶಬರ ಶಂಕರ ವಿಳಾಸವೆಂಬ ಚಂಪೂ ಕೃತಿ ರಂಗೋಲಿ ಕುರಿತ ಹಲವು ಮಾಹಿತಿಗಳನ್ನು ನೀಡುತ್ತದೆ ಈ ಕೃತಿಯ ದ್ವಿತೀಯ ಆಶ್ವಾಸದಲ್ಲಿ ಏಳನೇ ಪದ್ಯ ಮತ್ತೇಭವಿಕ್ರೀಡಿತ ವೃತ್ತದಲ್ಲಿದೆ

ಚಮರೀ ರಾಜ ರಜಂಗಳಂ
ಕಳೆಗುಮುದ್ಮದ್ದಂತಿ ನೀರಿಟ್ಟು ಸಂ |
ಭ್ರಮದಿಂ ಸಾರಣೆಗೆಯ್ದುದಲ್ಲಿ
ಪವನಂ ಪೂದೂಳಿಯಿಂ ರಂಗಮಂ ||
ಕ್ರಮದಿಂ ಮಾಳ್ಪುದು ಕೇಕಿ ಬರ್ಹದೆಲರಿಂ
ಹೋಮಾಗ್ನಿಯಂ ಪರ್ಧಿಕುಂ |
ಸುಮನ ಸ್ತೋಮಲಸತ್ಫಲ ಪ್ರಸರಮಂ
ಶಾಖಾಚರಂ ಸಾರ್ಚುಗುಂ ||

ಇದು ಋಷ್ಯಾಶ್ರಮದ ತಪೋ ಮಹಿಮೆಯ ವರ್ಣನೆ ಋಷ್ಯಾಶ್ರಮಗಳಲ್ಲಿ ಚಮರೀ ಮೃಗಗಳು ತಮ್ಮ ಬಾಲಗಳಿಂದ ಕಸವನ್ನು ಗುಡಿಸುವವು ಗಾಳಿಯು ಪುಷ್ಪ ಪರಾಗವನ್ನು ಉದುರಿಸಿ ರಂಗವಲ್ಲಿಯನ್ನಿಡುವುದು ನವಿಲು ತನ್ನ ಗರಿಗಳಿಂದ ಬೀಸಿ ಹೋಮಾಗ್ನಿಯು ಪ್ರಜ್ವಲಿಸುವಂತೆ ಮಾಡುವುದು ಕಪಿಗಳು ಹೂಗಳನ್ನು ಉತ್ಕೃಷ್ಟವಾದ ಫಲಗಳನ್ನು ತಂದು ಕೊಡುವುವು ಈ ವರ್ಣನೆಯಲ್ಲಿ ಅಲ್ಲಿಯ ಪ್ರಕೃತಿಯೇ ಪವಿತ್ರ ಭಾವದಿಂದ ಕೂಡಿ ಅಲ್ಲಿನ ಪ್ರಾಣಿ ವರ್ಗದವರಿದಲೂ ಪವಿತ್ರ ಕಾರ್ಯಗಳನ್ನು ಮಾಡಿಸುತ್ತದೆ ಹಾಗೂ ಗಾಳಿಯು ಪುಷ್ಪ ಪರಾಗಗಳನ್ನುದುರಿಸಿ ರಂಗೋಲಿ ಬರೆದು ಸೇವೆಗೈವ ಕಾರ್ಯದಲ್ಲಿ ತೊಡಗಿದೆ ಎಂದು ಸೂಚಿಸಲಾಗಿದೆ

ಈ ಕೃತಿಯ ಪಂಚಮಾಶ್ವಾಸದ 57ನೇ ಪದ್ಯದ ತರುವಾಯದ ಕೈಲಾಸ ವರ್ಣನೆಯ ಕುರಿತ ವಚನ ಸೊಗಸಾಗಿದೆ–


ಮಾರಾಟಕ್ಕೆ ಸಿದ್ಧವಾಗಿವೆ
ತಾಮ್ರ ಚಿತ್ರಪಟಗಳು
ಶ್ರೀ ವೆಂಕಟೇಶ್ವರಸ್ವಾಮಿ
ಹಾಗೂ
ಶ್ರೀ ಪದ್ಮಾವತೀ ಅಮ್ಮನವರ
ಆಕರ್ಷಕ ತಾಮ್ರಚಿತ್ರಗಳ ಫಲಕಗಳು-
ಸುಲಭ ಬೆಲೆಯಲ್ಲಿ ದೀರ್ಘಕಾಲ
ಬಾಳಿಕೆ ಬರುವ ಸುಂದರ ತಾಮ್ರ ಚಿತ್ರಗಳು
ಎಲ್ಲ ತಿ. ತಿ. ದೇ. ಪ್ರಕಟನ ಮಾರಾಟ ಮಳಿಗೆಗಳಲ್ಲೂ
ದೊರೆಯುತ್ತವೆ.

ಅಂತೆಳ್ತಂದು ವರಮ ಸಂಭ್ರಮದಿನಗಣಿತ
ಮಣಿಗಣ ಗ್ರಥಿತ ಮುಕುರ
ಮಕರ ತೋರಣಾದಿನೋರಣಂ
ಬಡೆದೆತ್ತಿದ ಕನಕ ಕೇತನಗಳಿಂ
ಕತ್ತುರಿಯ ಸಾರಣೆಯಿಂ
ಕುಂಕುಮದ ಕಾರಣೆಯಿಂ ಬಿಡು ಮುತ್ತಿನ
ರಂಗವಲ್ಲಿಗಳಿಂ ಕೆದರ್ದ ಸುರ
ಕುಜದಲರ ಪೂವಲಿಗಳಿಂ ಸಿಂಗರಂ
ಬೆತ್ತ ರಾಜ ವೀಧಿಗಳಿಂ ಮಂಗಳ
ತರಮಾಗಿ ಕಣ್ಗೋಳಿವ ನಿಜರಾಜ-
ಧಾನಿಯೆನಿವ ಕೈಲಾಸಪುರವರಮುಂ ಪೊಕ್ಕು

—ಶಿವನ ರಾಜಧಾನಿಯಾದ ಕೈಲಾಸವು ನಾನಾ ರತ್ನಖಚಿತವಾದ ಕನ್ನಡಿಗಳಿಂದ ರಚಿತವಾದ ಮಕರ ತೋರಣಂಗಳಿದಲೂ ಅನುವಾಗಿ ಏರಿಸಿದ್ದ ಕನಕ ಧ್ವಜಗಳಿಂದಲೂ ಅಲಂಕೃತವಾಗಿದ್ದಿತು ಕಸ್ತೂರಿಯಿಂದ ಸಾರಿಸಿ ಕುಂಕುಮದ ಕಾರಣೆಗಳನ್ನಿಟ್ಟಿದ್ದರು ಶುಭ್ರವಾದ ಮುತ್ತುಗಳ ರಂಗವಲ್ಲಿಯನ್ನಿಟ್ಟಿದ್ದರು ರಾಜಬೀದಿಗಳು ಕಲ್ಪ ವೃಕ್ಷದ ಹೂಗಳಿಂದ ರಚಿಸಿದ ರಂಗೋಲಿಗಳಿಂದ ಅಲಂಕೃತವಾಗಿ ಪಟ್ಟಣವು ಸಿಂಗಾರಮಯವಾಗಿ ಉತ್ಸವಕ್ಕೆ ಸಿದ್ಧವಾಗಿ ಮಂಗಳಮಯವಾಗಿತ್ತು —ಈ ವಚನದಲ್ಲಿ ರಂಗೋಲಿ ಬರೆಯುವ ಒಂದು ಸಾಧನ ಕಲ್ಪವೃಕ್ಷದ ಹೂವಿನಂಥ ರಚನೆ ಎಂದಿದೆ

ಸುಮಾರು ಹದಿನೇಳನೆ ಶತಮಾನದ ಪ್ರಾರಂಭದ ಉತ್ತರ ದೇಶದ ಬಸವಲಿಂಗ ವಿರಚಿತ ಬಸವೇಶ್ವರ ಪುರಾಣ ಕಥಾಸಾಗರ ಎಂಬ ಕೃತಿಯಲ್ಲೂ ರಂಗೋಲಿಯ ಉಲ್ಲೇಖಗಳು ದೊರೆಯುತ್ತವೆ ಅಲ್ಲಿ ಕರ್ಪೂರದ ರಂಗವಲ್ಲಿಯೆಂದೂ ಕುಂಕುಮದ ರಂಗವಲ್ಲಿ ಯೆಂದೂ ವಿವರಗಳು ದೊರೆಯುತ್ತವೆ

ಹವ್ಯಕರ ಶೋಬಾನೆ ಹಾಡುಗಳಲ್ಲಿ ಮಹಾಲಕ್ಷ್ಮಿಯ ಮನೆವಾರ್ತೆ ಹಾಡು ಎಂಬ ತ್ರಿಪದಿಯಲ್ಲಿ ರಂಗೋಲಿ ಪ್ರಾತ ಕಾಲದಲ್ಲಿ ಸೂರ್ಯೋದಯಕ್ಕೆ ಮುಂಚೆ ಹಾಕುವ ಕ್ರಮವನ್ನು ತಿಳಿಸಲಾಗಿದೆ—

ಪಶುವು ಏಳದ ಮುನ್ನ
ಹೊನಗೋಮಯವ ತಂದು
ಎಸೆವ ದೇವಾರ ಜಗಲಿಯ ಸಾರಿಸಿ
ಅಷ್ಟದಳಗಳನೆ ಬರೆದಳು ||

ಋತು ಸ್ತ್ರೀಯನ್ನು ಕುಳ್ಳಿರಿಸುವುದು ಎಂಬ ಸವಪದಿ ಹಾಡಿನಲ್ಲಿ ರಂಗೋಲಿ ಬಗ್ಗೆ ಹೀಗಿದೆ—

ಅಂಗಜನ ಮುಂಗೈಯ ಗಿಣಿಯನು
ನಂಗರವ ಮಾಡಿ ಮುದದಲಿ
ರಂಗವಲಿಗಳನಿಕ್ಕಿ ನೋಡಿ
ಬೆಡಂಗಿನಲಿ ಪಾಡಿ ಸುರಮುನಿ
ಯಂಗನೆಯರಂದೆಲ್ಲ ಶೋಭನ
ದಂಗುರದಿ ಗುರುಹಿರಿಯರ ಚರ
ಣಂಗಳಿಗೆರಗಿಸುತ ಪೊಗಳುತ
ಮಂಗಳಾಂಗನೆಯನ್ನು ಸೇಸೆಗ
ಳಿಂಗಿತ ವೈಭವದಿ ಕುಳಿಸ್ಸಾರು ||

ಹೀಗೆ ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ರಂಗೋಲಿಯ ಉಲ್ಲೇಖಗಳ ನಿಖರವಾದ ಅಧ್ಯಯನವು ರಂಗೋಲಿಗಳ ವೈವಿಧ್ಯ ರಚನಾ ವಿಧಾನ ಜನರ ಭಾವುಕ ಪಾವಿತ್ರ್ಯಗಳಿಗೆ ಕನ್ನಡಿ ಹಿಡಿಯುತ್ತದೆ ರಂಗೋಲಿಗಳ ಅಧ್ಯಯನವನ್ನೇ ಕೈಗೆತ್ತಿ ಸಂಶೋಧನೆ ಮಾಡುವ ವಿಪುಲ ಅವಕಾಶ ಈ ಕ್ಷೇತ್ರದಲ್ಲಿದೆ

***

# ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

ಸ್ವಲ್ಪವೇ ಸಂಪದವನ್ನು ನೀಡಿರಿ ದೈವಿಕ ಸಂಪತ್ತನ್ನು ಪಡೆಯಿರಿ

ಶ್ರೀ ವೆಂಕಟೇಶ್ವರಸ್ವಾಮಿ ಸನ್ನಿಧಿಯಾದ ತಿರುಮಲೆ ಕಲಿಯುಗ ವೈಕುಂಠವಾಗಿ [illegible] ಯಾತ್ರಿಕರು ಸ್ವಾಮಿ ದರ್ಶನಕ್ಕಾಗಿ ಆಗಮಿಸುತ್ತಾರೆ ದಿನದಿನವೂ ಹೆಚ್ಚುತ್ತಿರುವ ಯಾತ್ರಿಕ ಸಂದಣಿಯ ವಸತಿ [illegible] ತಿ ತಿ ದೇ ಗಳು ಸುಸಜ್ಜಿತ ಅತಿಥಿಗೃಹಗಳನ್ನೂ ಈಗಿರುವ ಕಾಟೇಜುಗಳ ಮೇಲೆ ಮೊದಲ ಅಂತಸ್ತು ಕೊಠಡಿಗಳನ್ನು [illegible] ಕೋಣೆಗಳನ್ನೂ ದಾನಯೋಜನೆಯಲ್ಲಿ ನಿರ್ಮಿಸುತ್ತಿದೆ ತಿರುಮಲೆಯಲ್ಲ ವರ್ಷಪೂರ್ತಿ ಸೇರುವ ಯಾತ್ರಿಕ [illegible] ಭಕ್ತದಾನಿಗಳಿಗೆ ಇದೊಂದು ಸದವಕಾಶ

## ೧ ಮೊದಲ ಅಂತಸ್ತು

ತಿರುಮಲೆಯ ಆಳ್ವಾರ್ ಟ್ಯಾಂಕ್ ಮಂಗಳಭಾವಿ ಶಂಕ ಮಿಟ್ಟ ಶೇಷಾದ್ರಿನಗರ [illegible] ನಗರ ಕಾಟೇಜುಗಳಲ್ಲಿ (ಸಿ ಹಾಗೂ ಡಿ ಭಾಗಗಳು) (ನೆಲ ಅಂತಸ್ತಿನಲ್ಲಿರುವ ಎ ಹಾಗೂ ಬಿ [illegible] ಅಂತಸ್ತು ಕಾಟೇಜುಗಳನ್ನು ನಿರ್ಮಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದ್ದು ಎ ಟಿ ಸಿ ಎಂ [illegible] ಸಿ ಗಳಲ್ಲಿ ನೂರು ಕಾಟೇಜುಗಳ ಮೊದಲ ಅಂತಸ್ತು ನಿರ್ಮಾಣ ಪೂರ್ತಿಯಾಗಿ ದಾನಿಗಳಿಗೆ ನೀಡಲಾಗಿ [illegible] ಗಳಲ್ಲಿನ ನೂರು ಮೊದಲ ಅಂತಸ್ತು ಕಾಟೇಜುಗಳು ನಿರ್ಮಾಣ ಪೂರ್ಣಗೊಳ್ಳುವ ಹಂತದಲಿವೆ ಇವು ತಿ [illegible] ಟಕ [illegible] ಗಳ ಒಳಿಯಿವೆ ನೆಲ ಅಂತಸ್ತಿನ ಎ ಹಾಗೂ ಬಿ ಕಾಟೇಜುಗಳ ಮೇಲೆ ಸಿ ಹಾಗೂ ಡಿ ಬಾಗಗಳ ಕಾಟೇಜುಗಳ [illegible] ಎರಡು ಕೋಣೆಗಳನ್ನು ಹೊಂದಿ (೯೭೨ ಚದರಡಿ ಹಾಗೂ ೧೧೧೨ ಚದರಡಿ) ಸ್ನಾನ ಶೌಚಗೃಹಗಳೊಂದಿಗೆ ಕೂಡಿರುತ್ತವೆ

ರೂ ೧೫ ಲಕ್ಷ ರೂಗಳನ್ನು ನೀಡುವುದರಿಂದ ದಾನಿಯು ಒಂದು ಮೊದಲ [illegible] ತಮ್ಮ (ತಮ್ಮ ಸಂಸ್ಥೆ, ಟ್ರಸ್ಟ್ ಕಂಪನಿ) ಹೆಸರಿನಲ್ಲಿ ದಾನ ಮಾಡಬಹುದು

## ೨ ರಾಮಬಗೀಚ ಅತಿಥಿ ಗೃಹಗಳು

ಪ್ರತಿಯೊಂದ ಅಂತಸ್ತಿನಲ್ಲೂ ೫೦ ಸೂಟ್‌ಗಳಂತೆ ಮೂರು ಅಂತಸ್ತುಗಳಲ್ಲಿ ಒಟ್ಟು ೧೫೦ ಸೂಟ್‌ಗಳ [illegible] ಮೂರು ಅತಿಥಿಗೃಹಗಳನ್ನು ನಿರ್ಮಿಸಲು ಯೋಜಿಸಲಾಗಿದ್ದು ಅತಿಥಿಗೃಹ ೧ರಲ್ಲಿ ೧೦೮ ಸೂಟ್‌ಗಳನ್ನು ನಿರ್ಮಿಸಿ ದಾನಿಗಳಿಗೆ ನೀಡಲಾಗಿದೆ ಅತಿಥಿಗೃಹ ೨ರಲ್ಲಿ ೧೫೦ ಸೂಟ್‌ಗಳನ್ನು ನಿರ್ಮಿಸಿ ೫೮ ಸೂಟ್‌ಗಳನ್ನು ದಾನಿಗಳಿಗೆ ನೀಡಲಾಗಿದೆ ಇಲ್ಲಿನ ಮಿಕ್ಕ ೯೨ ಸೂಟ್‌ಗಳೇ ಅಲದೆ ಅತಿಥಿಗೃಹ ೩ರಲ್ಲಿನ ೧೫೦ ಸೂಟ್‌ಗಳು ನಿರ್ಮಾಣದ ಕೊನೆಯ ಹಂತದಲ್ಲಿವೆ

ಈ ಮೂರು ಅತಿಥಿಗೃಹಗಳು ದೇವಾಲಯದ ಎದುರಿಗೆ ಅರ್ಧ ಫರ್ಲಾಂಗ್ ದೂರದಲ್ಲಿ ಬೇಡಿ ಆಂಜನೇಯಸ್ವಾಮಿ ದೇವಾಲಯದ ಹಿಂಭಾಗದಲ್ಲಿ ನೂತನ ಆಸ್ಥಾನ ಮಂಟಪದ ಪಕ್ಕದಲ್ಲಿವೆ ಪ್ರತಿ ಸೂಟ್‌ನ ಪ್ಲಿಂತ್ ಏರಿಯಾ ೪೪೫ ಚದರಮೀಟರ್ ಆಗಿದ್ದು (ಸ್ನಾನ ಶೌಚ ಗೃಹಗಳೊಡನೆ) ಸಾಮಾನ್ಯ ಅಂಗಳವಿದೆ

ರೂ ೬೦ ೦೦೦ ಮೊತ್ತದ ದಾನದಿಂದ ಒಂದು ಸೂಟ್ ಅನ್ನು ದಾನಿಗಳ ತಮ್ಮ ತಮ್ಮ ಹೆಸರಿನಲ್ಲಿ ನೀಡಬಹುದು

## ೩ ಸಪ್ತಗಿರಿ ಸತ್ರಗಳು

ಒಂದು ಕೇಂದ್ರ ವಿಭಾಗದ ಸುತ್ತ ೯ ವಿಭಾಗಗಳಿರುವಂತಹ ಒಂದು ಮಹತ್ ಯೋಜನೆಯನ್ನು ತಿ ತಿ ದೇ ಆರಂಭಿಸಿದೆ ೧ ಹಾಗೂ ೯ ನೇ ವಿಭಾಗಗಳು ಪ್ರವೇಶ ಹಾಗೂ ಉಪಹಾರಗೃಹಗಳಿಗಾಗಿ ಕೇಂದ್ರ ವಿಭಾಗವು ಲಕ್ಷ [illegible] ಅಂಗಳವನ್ನು ಹೊಂದಿದ್ದು ಎಂಟು ಮುಖಗಳಲ್ಲೂ ಒಂದೊಂದು ವಿಭಾಗ ನಿರ್ಮಾಣವಾಗುವುದು ಯಾವುದೇ ವಿಭಾಗಕ್ಕೂ ೧ನೇ ವಿಭಾಗದಿಂದ ಪ್ರವೇಶ ಮಿಕ್ಕ ವಿಭಾಗಗಳು ೨ ರಿಂದ ೮ (ಒಟ್ಟು ೭ ವಿಭಾಗ) ೯೫೪ ಕೋಣೆಗಳನ್ನು ಹೊಂದಿದ್ದು ೧೧ ಕೋಣೆಗಳ ಆಡಳಿತ ನಿರ್ವಹಣೆಗಾಗಿದ್ದು ಮಿಕ್ಕ ೯೪೩ ಕೋಣೆಗಳನ್ನು ಯಾತ್ರಿಕರಿಗೆ ನೀಡಲಾಗುವುದು ಮೊದಲ ಹಂತದಲ್ಲಿ ೨ ಹಾಗೂ ೩ನೇ ವಿಭಾಗಗಳ (೧೦೮+೧೪೯) ೨೫೭ ಕೋಣೆಗಳ ನಿರ್ಮಾಣವನ್ನು ಕೈಗೆತ್ತಿಕೊಂಡು ಪೂರ್ಣಗೊಳಿಸುವ ಹಂತದಲ್ಲಿದೆ ಪ್ರತಿ ಕೋಣೆಯ ವಿಸ್ತೀರ್ಣ (ಸ್ನಾನ ಶೌಚಗಳೊಂದಿಗೆ)೧೨+೧೪ ರೂ ೪೦ ೦೦೦ ಗಳ ದಾನದಿಂದ ದಾನಿಯು ತಮ್ಮ ಹೆಸರಿನಲ್ಲಿ ಕೋಣೆಯನ್ನು ನೀಡಬಹುದು ಈ ವರೆಗೆ ೮೦ ಕೋಣೆಗಳಿಗಾಗಿ ಆಂಶಿಕ ಹಾಗೂ ಪೂರ್ಣ ದಾನಗಳನ್ನು ಸ್ವೀಕರಿಸಲಾಗಿದೆ ಎರಡನೇ ವಿಭಾಗದ ಶೀಘ್ರ ಪೂರ್ಣತೆಯ ಬಳಿಕ ಅದನ್ನು ನೀಡಲಾಗುವುದು

## ೪ ಶೇಷಾದ್ರಿನಗರ ಅತಿಥಿಗೃಹ2

ಎರಡಂತಸ್ತಿನ ಈ ಅತಿಥಿಗೃಹದಲ್ಲಿ ೨೬ ಸೂಟ್‌ಗಳಿದ್ದು (ಪ್ರತಿ ಅಂತಸ್ತಿಗೆ ೧೩ ಸೂಟ್‌ಗಳು) ಯಾತ್ರಿಕರಿಗೆ ಬಾಡಿಗೆಯ ಮೇಲೆ ನೀಡಲಾಗುತ್ತದೆ ಪ್ರತಿ ಸೂಟ್ ೪.೨m x ೪.೨m ಇರುತ್ತದೆ

ಇಡೀ ಅತಿಥಿಗೃಹಕ್ಕಾಗಿ ಅಥವಾ ಪ್ರತಿ ಅಂತಸ್ತಿಗಾಗಿ ದಾನಗಳಿಗೆ ಆದ್ಯತೆ ನೀಡಲಾಗುವುದು

೨೫ ಲಕ್ಷ ರೂಗಳ ದಾನದಿಂದ ವ್ಯಕ್ತಿ ವ್ಯಕ್ತಿಗಳ ಸಂಸ್ಥೆ ಕಂಪನಿ ಟ್ರಸ್ಟ್ ಇಡೀ ಅತಿಥಿಗೃಹದ ದಾನಿಗಳಾಗಲು ಸಾಧ್ಯ

ದಾನಿಗಳಿಗೆ ಸೌಲಭ್ಯಗಳು ದಾನಿಗಳು ತಮ್ಮ ಜೀವನಾವಧಿಯಲ್ಲೂ, ಕಂಪನಿ ಇತ್ಯಾದಿಗಳ ೧೫ ವರ್ಷಗಳೂ ವರ್ಷಕ್ಕೆ ೬೦ ದಿನ (ಒಮ್ಮೆ ೧೦ ದಿನಗಳಿಗೆ ಮೀರದಂತೆ) ತಮ್ಮ ದಾನದ ಕಾಟೇಜು ಸೂಟು ಕೋಣೆಗಳಲ್ಲಿ ನಾಮಮಾತ್ರಸೇವಾ ಶುಲ್ಕದಿಂದ ಇರಬಹುದು ದಾನಿಗಳ ಹೆಸರ ವಿಳಾಸಗಳನ್ನು ಶಿಲಾಫಲಕದಲ್ಲಿ ಕೆತ್ತಿಸಿ ದಾನದ ಕೊಠಡಿ ಸೂಟ್‌ಗಳಲ್ಲಿ ಪ್ರದರ್ಶಿಸಲಾಗುವುದು

ಮಿಕ್ಕವಿವರಗಳಿಗಾಗಿ ಕೂಡಲೇ ಬರೆಯಿರಿ ಕಾರ್ಯನಿರ್ವಹಣಾಧಿಕಾರಿ ತಿ ತಿ ದೇ ತಿರುಪತಿ

******

# ವೇಪಂಜೇರಿ

# ಶ್ರೀಲಕ್ಷ್ಮೀನಾರಾಯಣ ದೇವಾಲಯ

ದಕ್ಷಿಣಭಾರತದಲ್ಲಿ ಶೈವ ವೈಷ್ಣವ ದೇವಾಲಯಗಳು ಸಾವಿರಾರು [illegible]ವುದು ಐತಿಹಾಸಿಕ ಅಂಶ ಶಿವನನ್ನು ಲಿಂಗರೂಪದಲ್ಲಿ ಪೂಜಿಸುವ[illegible]ದರಿಂದ ಶಿವದೇವಾಲಯಗಳಲ್ಲಿ ವಿವಿಧಾಕಾರ[illegible] ವಿಷ್ಣುವಿನ ದೇವಾಲಯಗಳಲ್ಲಿರುವಂತೆ [illegible] ವಿರದೆನ್ನಬಹುದು ವಿಷ್ಣುವಿನ ದಶಾವತಾರ[illegible] ಅಲ್ಲದೆ ವಿಷ್ಣುವೆಂದೇ ಪೂಜಿಸುವ ದೇವಾಲಯಗಳೂ ಉಂಟು ಅಂತಹವುಗಳಲ್ಲಿ [illegible]ಟೆಯ ತಿರುನಾರಾಯಣಸ್ವಾಮಿ ದೇವಾಲಯ [illegible]ರಿಯ ಬದರೀ ನಾರಾಯಣ ದೇವಾಲಯ [illegible]ರದ ಸತ್ಯನಾರಾಯಣ ಸ್ವಾಮಿ ದೇವಾಲಯಗಳು ಪ್ರಸಿದ್ಧ ಆ ಪರಂಪರೆಗೇ ಸೇರಿದ್ದು ವೇಪಂಜೇರಿಯ ಲಕ್ಷ್ಮೀನಾರಾಯಣಸ್ವಾಮಿ ದೇವಾಲಯ

[illegible] ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯಲ್ಲಿ ಚಿತ್ತೂರಿನಿಂದ ಹದಿನೈದು ಕಿಲೋಮೀ[illegible] [illegible]ಗಾದರ [illegible] [illegible] ಪುಟ್ಟದಾದ ಕಿರುಗ್ರಾಮ [illegible] [illegible] ದೇವಾಲಯ [illegible] ಈ [illegible]ಮದ [illegible] ಕಾರಣ [illegible] [illegible] ಗ್ರಾಮೀಣ ಜನ[illegible] ನಡುವೆ [illegible] ನಡುವೆ ಶಾಂತಿಯ [illegible] ಲಕ್ಷ್ಮೀನಾರಾಯಣನ ಗುಡಿ ಇರುವುದ [illegible] ಅಂಶವಾಗಿದೆ

* * * *

ವೇಪಂಜೇರಿಯ ಶ್ರೀ ಲಕ್ಷ್ಮೀನಾರಾಯಣ ದೇವಾಲಯ ಇತಿಹಾಸ ಪ್ರಸಿದ್ಧವಾಗಿದ್ದು, ಮೊಘಲರು ತುರ್ಕರು ಕುತುಬರು ಆಂಗ್ಲರ ಆಡಳಿತಗಳನ್ನೆಲ್ಲ ದೇವಾಲಯ ಕಂಡಿದೆ ಯಾದರೂ ಖಚಿತವಾದ ಐತಿಹಾಸಿಕ ಪುರಾವೆಗಳು ಯಾವುವೂ 18ನೇ ಶತಕದ ವರೆಗಿನ ಕಾಲದಿಂದ ಹಿಂದಿನವು ದೊರೆತಿಲ್ಲ ದಾಖಲೆಗಳ ಅನುಪಲಬ್ಧಿಯಲ್ಲೂ ಜನಜನಿತವಾದ ನಂಬಿಕೆ, ದಂತಕಥೆಗಳು ಈ ದೇವಾಲಯದ ಚರಿತ್ರೆಯನ್ನು ಪುರಾಣಕಾಲದ ವರೆಗೆ ಹಿಂದಕ್ಕೆ ಒಯ್ಯುವುದುಂಟು ಖಚಿತವಾದ ಆಧಾರಗಳಿಗಾಗಿ ಹೆಚ್ಚಿನ ಪುರಾವಸ್ತು, ಶಾಸನ, ಉತ್ಖನನ ಸಾಹಿತ್ಯಕ ಸಂಶೋಧನೆಗಳು ನಡೆಯಬೇಕಿದೆ ದೊರೆತಿರುವ ಎಳೆಗಳನ್ನು ಹಿಡಿದು ಹಿಂದಕ್ಕೆ ಹೋದರೆ ಆಸಕ್ತಿದಾಯಕ ಅಂಶಗಳು ಹೊರಬೀಳಬಹುದು ಎಂಬ ಸೂಚನೆಗಳೂ ಉಂಟು

ಏನೇ ಆದರೂ ಸರಿಸುಮಾರು 250 ವರ್ಷಗಳಿಂದ ದೇವಾಲಯದ ಬಗ್ಗೆ ನಂಬಲರ್ಹವಾದ ಪುರಾವೆ ಸಾಕ್ಷಿಗಳುಂಟು ವೇಪಂಜೇರಿ ಗ್ರಾಮದ ಪ್ರಮುಖರಾಗಿ ನ್ಯಾಯಾಂಗ ಆಡಳಿತಾಂಗದಲ್ಲಿ ಅಧಿಕಾರವನ್ನು ಚಲಾಯಿಸುತ್ತಿದ್ದ ಕಾಮಂದೂರು ರಾಮಾನುಜ ಅಯ್ಯಂಗಾರ್ಯರು ಲಕ್ಷ್ಮೀನಾರಾಯಣನ ಅಂತರಂಗ ಭಕ್ತರಾಗಿದ್ದರು ಪ್ರತಿನಿತ್ಯ ಪ್ರಾತಃಕಾಲದಲ್ಲಿ ದೇವರಿಗೆ ಪೂಜೆ ಪುರಸ್ಕಾರಗಳನ್ನು ಸಲ್ಲಿಸಿದ ನಂತರವೇ ದೈನಂದಿನ ಐಹಿಕ ಕಾರ್ಯಗಳಲ್ಲಿ ತೊಡಗುತ್ತಿದ್ದರು ಅವರೊಮ್ಮೆ ನಸುಕಿನಲ್ಲಿ ದೇವರಿಗೆ ಪ್ರಾತಃಪೂಜೆಯನ್ನು ಸಲ್ಲಿಸಿ ಗೀತಾರಾಧನ ಸಮಯದಲ್ಲಿ ದೇವರ ಮುಂದೆ ನಿಂತು ಹಾಡಲು ಆರಂಭಿಸಿದಾಗ ಪ್ರಾಚೀನ ಯಾವುದೊಂದು ಗೀತೆಯನ್ನೂ ಆರಿಸಿಕೊಳ್ಳಲಾಗದೆ "ನಿನಗಾಗಿ ಹಾಡೊಂದ ನಾ ಹಾಡಲೇ" ಎಂದು ಭಗವಂತನನ್ನೇ ಕೇಳಿದರು ಕೂಡಲೇ ಭಗವಂತನೇ ನುಡಿಸಿದನೋ ಎಂಬಂತೆ ಮುಂದಿನ ಸಾಲು ಅವರ

ಬಾಯಿಂದ ಹೊರಬಂದಿತು ನಿನಗಾಗಿ ಜೀವ ನವ ನಾ ನಡೆಸಲೇ ಹಾಡು ನಿರರ್ಗಳವಾಗಿ ಒಂದು ಕಡೆ ನಡೆಯುತ್ತಿದ್ದಂತೆಯೇ ರಾಮಾನುಜರ ಮಿದುಳಿನಲ್ಲಿ ಸಾಕ್ಷಿಪ್ರಜ್ಞೆಯ ಇನ್ನೊಂದು ಧ್ವನಿ ಭಗವಂತನ ಲೀಲೆಯನ್ನು ಕಂಡು ಆಶ್ಚರ್ಯದ ಅನುಭವ ಹೊಂದುತ್ತಿತ್ತು ಅವರಿಗೆ ಹಾಡಿನ ಬಗ್ಗೆಯೇ ಅಲ್ಲ-ಇಹದ ಬಗ್ಗೆಯೇ ಪರಿವೆಯಿಲ್ಲ ದಾಯಿತು ಇಡೀ ಜೀವನವನ್ನು ಅವನ ಸೇವೆ ಗಾಗಿ ಹಾಡಿನ ತಾತ್ಪರ್ಯದಂತೆಯೇ ಮುಡಿ ಪಿಡಲು ನಿರ್ಧರಿಸಿ ತಮ್ಮ ಇತರೆಲ್ಲ ವ್ಯವಹಾರಗ ಳನ್ನೂ ಮಗನಿಗೊಪ್ಪಿಸಿ ಲಕ್ಷ್ಮೀನಾರಾಯಣರ ಸನ್ನಿ ಧಿಯನ್ನು ಸೇರಿ ಗುಡಿಯ ಕೆಲಸಗಳಲ್ಲಿ ತೊಡಗಿ ದರು

ಮಗ ಕಾಮಂದೂರು ಶ್ರೀನಿವಾಸ ರಾಘವನ್ ಅವರು ಉತ್ತಮ ಲೌಕಿಕರೂ ಶ್ರೇಷ್ಠ ಭಕ್ತರೂ ಆಗಿ ದ್ದರು ತಂದೆಗೆ ತಕ್ಕ ಮಗನಾಗಿ ಅತ್ತ ಗ್ರಾಮಾ ಡಳಿತವನ್ನು ನೋಡಿಕೊಂಡೇ ಇತ್ತ ತಂದೆಯವರ ದೈವಾಸಕ್ತಿಗೆ ಪ್ರೋತ್ಸಾಹ ದಾಯಕವಾದ ಸೇವೆ ಸಲ್ಲಿ ಸಿದರು ಇವರ ಕಾಲದಲ್ಲಿ ವೇಪಂಜೇರಿಯ ಲಕ್ಷ್ಮೀ ನಾರಾಯಣ ದೇವಾಲಯ ಹೊಸ ರೂಪವಡೆ ಯಿತು ಗರ್ಭಗೃಹ ಅರ್ಧಮಂಟಪ ಮುಖಮಂ ಟಪಗಳನ್ನು ನಿರ್ಮಿಸಿ ದೇವಾಲಯಕ್ಕಾಗಿ ಒಂದು ಪುಷ್ಕರಿಣಿಯನ್ನೂ ನಿರ್ಮಿಸಿದರು

ಪುಷ್ಕರಿಣಿಯಲ್ಲಿ ಗಂಗೆಯ ಆವಿರ್ಭಾವವಾಗಿ ಪುಷ್ಕಳವಾದ ತಿಳಿಯಾದ ಶುದ್ಧವಾದ ನೀರು ದೊರಕಿ ಗುಡಿಗೂ ಗ್ರಾಮಕ್ಕೂ ಎರಡು ವಿಧದ ಪ್ರಯೋಜನವಾಯಿತು ದೇವಾಲಯದ ನಿತ್ಯವಿ ಧಿಗಳನ್ನೂ ಸುತ್ತ ಮುತ್ತಲ ಜನರ ಧಾರ್ಮಿಕ ಕ್ರಿಯೆಗಳನ್ನೂ ಯಥಾವಿಧಿಯಾಗಿ ನಿರ್ವಹಿಸಲು ಅರ್ಚಕರನ್ನು ನೇಮಕ ಮಾಡಲಾಯಿತು ಮನೆಯ ಪ್ರಥಮ ಅಂತಸ್ತಿನಲ್ಲಿ ವಾಸಿಸುತ್ತಿದ್ದ ಈ ಅರ್ಚ ಕವಂಶ ಮಾಡಭೂಷಿ ವಂಶವೆಂದೇ ಪ್ರಸಿದ್ಧವಾ ಯಿತು ಶ್ರೀನಿವಾಸ ರಾಘವನ್ನರ ನಂತರ ನವ ವಿದ್ಯಾಭ್ಯಾಸ ಪಡೆದರೂ ಗ್ರಾಮಕ್ಕೆ ಹಿಂದಿರುಗಿದ ಅವರ ಮಗ ರಂಗಮನ್ನಾರ್ 72 ವರ್ಷದ ವಕ್ಷ ವಯಸ್ಸಿನ ವರೆಗೆ ಗ್ರಾಮಸ್ಥರ ಮುಂದಾ ಳಾಗಿ ದೇವರ ಸೇವೆಯಲ್ಲಿ ದಿನಕಳೆದು 1952 ರಲ್ಲಿ ದೇವರ ಪಾದ ಸೇರಿದರು

ಮಾಡಭೂಷಿ ವಂಶಸ್ಥರು 1965 ರ ವರೆಗೆ ರಂಗಮನ್ನಾರ್ ಅವರ ನಿಧನದ ನಂತರ ದೇವಾ ಲಯದ ನಿತ್ಯ ಪೂಜಾವಿಧಿಯನ್ನು ನಡೆಸಿಕೊಂಡು ಬಂದರೂ ನಂತರ ಇದ್ದ ಅರ್ಚಕರೂ ವೃದ್ಧಾಪ್ಯ ದಿಂದಾಗಿ ಮಕ್ಕಳೊಡನಿರಲು ಗ್ರಾಮವನ್ನು ತ್ಯಜಿ ಸಿದ್ದರಿಂದ ದೇವಾಲಯವನ್ನು ನೋಡುವವರಿಲ್ಲದೆ ಜೀರ್ಣವಾಗತೊಡಗಿತು

ತಿರುಪತಿಯ ಖ್ಯಾತ ವಕೀಲರಾದ ಶ್ರೀ ಕೆ ಎಸ್ ಶ್ರೀಧರ್ ಅವರು 1984ರಲ್ಲಿ ತಮ್ಮ ತವರೂ ರಿಗೆ ಹೋದಾಗ ತಮ್ಮ ಹಿರಿಯರ ಪೂಜೆಗೆ ಒಳ ಗಾಗಿ ಕೀರ್ತಿಶಾಲಿಯಾಗಿದ್ದ ದೇವಾಲಯದ ಸದ್ಯದ ದುಸ್ಥಿತಿಯನ್ನು ಗಮನಿಸಿ ಅದರ ಜೀರ್ಣೋ ದ್ಧಾರಕ್ಕೆ ಸಂಕಲ್ಪಿಸಿದರು ದನಗಳ ಕೊಟ್ಟಿಗೆ ಯಾಗಿ ಅವರಿವರಿಗೆ ಆಗಾಗ ಆಶ್ರಯ ಸ್ಥಾನವಾ ಗಿದ್ದ ದೇವಾಲಯವನ್ನು ವ್ಯವಸ್ಥಿತವಾಗಿ ನೋಡಿ ಕೊಂಡು, ನಿತ್ಯ ಪೂಜೆ ನೈವೇದ್ಯಗಳಾಗುವಂತೆ ನಡೆಸಲು ಪುನ ದೇವಾಲಯಕ್ಕೆ ಭಕ್ತರು ಬಂದು ಶಾಂತಿ ಸಮತೆಗಳನ್ನು ಪಡೆಯುವಂತೆ ಅನು ಕೂಲಗಳನ್ನು ಕಲ್ಪಿಸಲು ದೃಢನಿಶ್ಚಯ ಮಾಡಿದ ಅವರು ಗ್ರಾಮದ ಹಿರಿಯರ ನೆರವಿನಿಂದ ದೇವಾ ಲಯದ ಜೀರ್ಣೋದ್ಧಾರ ಕಾರ್ಯವನ್ನು ಕೈಗೆತ್ತಿ ಕೊಂಡರು ನಿತ್ಯ ಪೂಜೆಗಳಿಗಾಗಿ ತಕ್ಕ ಅರ್ಚ ಕರ ನೇಮಕಾತಿಯಾಗಿ ಸುಣ್ಣ ಬಣ್ಣದ ಕೆಲಸ ಗಳಾಗಿ, ಹೊಸ ಹೊಸ ಸೇರ್ಪಡೆಗಳು ನಡೆದು 1986 ರಲ್ಲಿ ಮಹಾ ಕುಂಭಾಭಿಷೇಕವನ್ನು ನಡೆಸ ಲಾಯಿತು ಚಕ್ರತ್ತಾಳ್ವಾರರು ಶ್ರೀದೇವಿ ಭೂದೇವಿ ಸಹಿತ ಉತ್ಸವ ಮೂರ್ತಿಗಳನ್ನು ಪ್ರತಿಷ್ಠಾಪಿಸಿ ವರ್ಷಕ್ಕೊಮ್ಮೆ ಬ್ರಹ್ಮೋತ್ಸವ ನಡೆಸುವಂತೆ ಆಗಿ ಆಗ ಗಿ ಮೊದಲಿಗೆ ಶೇಷವಾಹನ ಹನುಮ ದ್ವಾಹನಗಳನ್ನು ನಿರ್ಮಿಸಿ ಇತರ ವಾಹನಗಳನ್ನು ಹೊಂದಿಸಿಕೊಳ್ಳಲಾಯಿತು ಈ ವರ್ಷ ಗರುಡ ವಾಹನ ಗಜವಾಹನ ಪಲ್ಲಕ್ಕಿ ಮೊದಲಾದವನ್ನು ಮಾಡಿಸಲಾಗಿದೆ

ದೇವಾಲಯ ವಿವರಗಳು ಕೆಳಕಂಡಂತೆ ಇವೆ

## * ನೀತಿ ಸುಧಾ *

ಮಿತ್ರಂ ತು ಶತ್ರುರಿವ, ದಾಸಸಮಂ ಸ್ವಭಾರ್ಯಾ
ದೇವೋಽಪಿ ತಂ ತ್ಯಜತಿ, ನಿಂದತಿ ಚಾ ಧಿಕಾರೀ ।
ಪುತ್ರಸ್ತು ಪಶ್ಯತಿ ನ ತಂ, ಸುಜನಾಸ್ತ್ಯಜಂತಿ
ಪ್ರಾರಬ್ಧಕರ್ಮ ಹಿ ಕರೋತಿ ವಿಚಿತ್ರಮತ್ರ ॥

(ಮಿತ್ರನೋ ಶತ್ರುವಿನಂತೆ ಪತ್ನಿಯಾದರೋ ದಾಸಸಮಾನ ವಾಗಿ, ದೇವರೂ ಉದಾಸೀನತೆಯಿಂದ ಕಾಣುವ, ಇನ್ನು ಅಧಿ ಕಾರಿಯೋ ನಿಂದಿಸುವ, ಮಗನೂ 'ತಂದೆ" -ಎಂದು ಪ್ರೀತಿಸುವು ದಿಲ್ಲ, ಸಜ್ಜನರ ಸಂಗ ಲಭಿಸದು ಒಟ್ಟಿನಲ್ಲಿ ಪ್ರಾರಬ್ಧಕರ್ಮವು ಈ ಭೂಮಿಯಲ್ಲಿ ವಿಚಿತ್ರ ಲೀಲೆಯನ್ನು ನಡೆಸುತ್ತದೆ)

ಧೈರ್ಯಂ ತು ಮಾ ತ್ಯಜ ಕದಾಪಿ ಕುರು ಸ್ವರಕ್ಷಾಂ
ಸ್ವಾರ್ಥಂ ತು ಮಾ ಕುರು, ಸದಾ ಕುರು ದಿವ್ಯಕಾರ್ಯಮ್
ಕ್ರೋಧಂ ಸದಾ ತ್ಯಜ, ಫಲಂ ತು ದದಾತಿ ಕಾರ್ಯ
ನಿಷ್ಕಾಮಕರ್ಮ ಚಕಿತಂ ಹಿ ಕರೋತಿ ದೇವಮ್ ॥

(ಮಾನವನು ಎಂದಿಗೂ ಧೈರ್ಯ ಬಿಡದೆ, ಸ್ವರಕ್ಷಣೆಯನ್ನು ಮಾಡಿಕೊಳ್ಳಬೇಕು ಸ್ವಾರ್ಥ ಮಾಡದೆ, ಸದಾ ಉತ್ತಮೋತ್ತಮ ಕಾರ್ಯಗಳನ್ನೇ ಮಾಡಬೇಕು ಸದಾ ಕ್ರೋಧವನ್ನು ಬಿಡಬೇಕು ಆ ಕಾರ್ಯಗಳೇ ಫಲ ನೀಡುತ್ತವೆ ನಮ್ಮ ನಿಷ್ಕಾಮಕರ್ಮವೇ ದೇವರನ್ನೂ ಚಕಿತಗೊಳಿಸುವಂಥದಾಗಿರುತ್ತದೆ)

ವಿ ಗ ವೇದೇಶ್ವರ:

ಮುಖದ್ವಾರ ಎಂಟಡಿ ಎತ್ತರ ಐದಡಿ ಅಗಲ ವಿದ್ದು ಮುಂದೆ ಎರಡು ಕಲ್ಲಿನ ಕಂಭಗಳಿದ್ದು ಆಂಜನೇಯ ನಾಗರುಗಳು ಕಲ್ಪವೃಕ್ಷ ದಶಾವ ತಾರಗಳ ಉಬ್ಬು ಶಿಲ್ಪಗಳಿವೆ ಅರ್ಧಮಂಟಪವು ಹತ್ತು ಅಡಿ ಎತ್ತರವಾದ್ದು ಎಂಟು ಕಂಭಗಳ ಆಧಾ ರದಲ್ಲಿದೆ ಈ ಕಂಭಗಳ ಮೇಲೆ ಆಂಜ ನೇಯ ನರಸಿಂಹ ಯಕ್ಷಿಣಿ ಆಂಡಾಳ್ ಕಮಲ ಮೊದಲಾದ ಉಬ್ಬುಶಿಲ್ಪಗಳು ಮನಮೋಹಕ ವಾಗಿವೆ ಮುಂದಿರುವ ಗಜಲಕ್ಷ್ಮಿಯಂತೂ ನೆರೆ ಹಿಡಿಯವಷ್ಟು ಸುಂದರ ಮಂಟಪದಲ್ಲಿ ರಾಮಾ ನುಜರು ವಿಶ್ವಕ್ಸೇನ ನಮ್ಮಾಳ್ವಾರರ ವಿಗ್ರಹ ಗಳಿವೆ ಕಿರಿದಾದ ಗರ್ಭಗೃಹದಲ್ಲಿ ಮೂರಡಿ ಎತ್ತರದ ವೇದಿಕೆಯ ಮೇಲೆ ಪೂರ್ಣ ಪ್ರಮಾ ಣದಲ್ಲಿ ಅರಳಿದ ಕಮಲದ ಮೇಲೆ ಎಡದ ತೊಡೆಯಮೇಲೆ ಲಕ್ಷ್ಮಿಯನ್ನು ಕೂರಿಸಿಕೊಂಡು ಕುಳಿತ ಭಂಗಿಯ ನಾಲ್ಕು ಕರಗಳ ಎರಡೂ ವರೆ ಅಡಿ ಎತ್ತರದ ವಿಷ್ಣು ಮೂರ್ತಿ ಕರಿಕಲ್ಲಿ ನಲ್ಲಿ ಕಡೆದ ಸ್ವಾಮಿ ಲಕ್ಷ್ಮಿಯೊಂದಿಗೆ ಕುಳಿತು ಭಕ್ತರಿಗೆ ದರ್ಶನ ಕೊಡುವ ಅಪರೂಪದ ಶಿಲ್ಪ ಗಳಲ್ಲಿ ಇದೊಂದಾಗಿದೆ ಹಿಂದೆ ರಂಗಮ ನ್ನಾರ್ ಅವರ ಕಾಲದಲ್ಲಿ ಗರ್ಭಗೃಹದ ಮೇಲೆ ನಿರ್ಮಿಸಿದ್ದ ಗುಂಡಾದ ಜೀರ್ಣವಾದ ವಿಮಾನದ ಸ್ಥಳದಲ್ಲಿ ಹೊಸದಾಗಿ ಹೊಸರೂಪದಿಂದ ನಿರ್ಮಿ



ಬಿ ಎನ್ ಶ್ರೀನಿವಾಸನ್



ತವಾದ ವಿಮಾನಗೋಪುರವಿದ್ದು 1990 ರಲ್ಲಿ ಬಾಲಾಲಯ ತಿರುಮಂಜನ ಪ್ರತಿಷ್ಠೆ, ಕಲ್ಯಾಣೋ ತ್ಸವಗಳು ನಡೆದವು

ಈ ವರ್ಷದ ಮೇ ತಿಂಗಳಿನಲ್ಲಿ ಐದು ದಿನ ಗಳ ಕಾಲ ಬ್ರಹ್ಮೋತ್ಸವವನ್ನು ವೈಭವದಿಂದ ನಡೆ ಸಲು ಏರ್ಪಾಡುಗಳು ಭರದಿಂದ ನಡೆದಿವೆ ಮೇ ಒಂದರಂದು ಧ್ವಜಾರೋಹಣ ಶೇಷವಾಹನ ಗರು ಡವಾಹನಗಳೂ ಎರಡರಂದು ಹನುಮದ್ವಾಹನ ಗಜವಾಹನಗಳೂ ಮೂರರಂದು ಸೂರ್ಯಪ್ರಭ ಚಂದ್ರಪ್ರಭ ವಾಹನಗಳೂ ನಾಲ್ಕರಂದು ಭಾನು ವಾರ ಪಲ್ಲಕ್ಕಿ ಉತ್ಸವ ಅಶ್ವವಾಹನಗಳೂ ಅಂದೇ ಕಲ್ಯಾಣೋತ್ಸವ ವಸಂತೋತ್ಸವಗಳೂ 5 ರಂದು ಚಕ್ರಸ್ನಾನ ಧ್ವಜಾವರೋಹಣಗಳೂ ನಡೆಯುತ್ತವೆ

ದೇವಾಲಯ ಜೀರ್ಣೋದ್ಧಾರವಾಗಿ ಸುತ್ತಮು ತ್ತಲ ಗ್ರಾಮಗಳಿಗೆಲ್ಲ ಧಾರ್ಮಿಕ ಕೇಂದ್ರವಾಗಿರು ವುದೇ ಅಲ್ಲದೆ ಒಂದು ಯಾತ್ರಾಸ್ಥಳವೂ ಆಗಿ ಅಭಿವೃದ್ಧಿ ಆಗುತ್ತಿದೆ ಅಂತಹುದರಲ್ಲಿ ಬ್ರಹ್ಮೋ ತ್ಸವ ಸಂಭ್ರಮದಿಂದಾಗಿ ಅತಿಹೆಚ್ಚಿನ ಜನವನ್ನು ಆಕರ್ಷಿಸುವುದು ಸಹಜವೇ ಆಗಿದೆ



# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ನತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ(ವೈಕುಂಠ)ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು

* ನರತಿಯ ನಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ

* ನರತಿಯ ನಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ

* ಯಾತ್ರಿಕರ ವಾಚನಾಭರುಚಿಯನ್ನು ಹೆಚ್ಚಿಸುವ ತಿ.ತಿ.ದೇ ಪ್ರಕಟಣೆಗಳಾದ ಪುಸ್ತಕಗಳು ದೈವಚಿತ್ರಗಳ ಮಾರಾಟ

* ನರತಿಯ ನಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ ಭಕ್ತಿ ಸಂಗೀತ

* ನರತಿಯ ನಾಲು ಹಾಗೂ ತಿರುಮಲೆಯ ಕಾಲುಹಾದಿಯ ೭ ನೇ ಮೈಲಿಯ ಬಳಿ ವೈದ್ಯಸೌಲಭ್ಯ ಉಪಹಾರ ಸೌಲಭ್ಯ ಕ್ಯಾಂಟೀನ್

* ಯಾತ್ರಿಕರ ವಸ್ತುಗಳು ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿದ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ

* ನರತಿಯ ನಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ

ಗಮನಿಕೆ ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮.೩೦ ಗಂಟೆಯವರೆಗೆ ಕೆಲಸಮಾಡುತ್ತದೆ ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦.೩೦ ರಿಂದ ೧.೦೦ ಗಂಟೆಯವರೆಗೆ ಕೆಲಸಮಾಡುತ್ತದೆ

# ಸ್ನಾನ - ಏನಿದರ ಮಹತ್ವ

ಎಸ್ ರೋಹಿಣಿ ಶರ್ಮ

ವೇದ ಪಾರಾಯಣದ ಫಲ ಗಂ
ಗಾದಿ ತೀರ್ಥಸ್ನಾನ ಫಲ ಕೃ
ಛ್ರಾದಿ ತಪಸಿನ ಫಲವು

ಕುಮಾರವ್ಯಾಸ ತನ್ನ ಗದುಗಿನ ಭಾರತದಲ್ಲಿ ಗದುಗಿನ ಭಾರತ ವನ್ನು ಪಠಿಸುವುದರಿಂದ ಕೆಲವೊಂದು ಫಲಗಳು ಲಭಿಸುವುದೆಂದು ತಿಳಿಸಿದ್ದಾನೆ ಅದರಲ್ಲಿ ಗಂಗಾತೀರ್ಥ ಸ್ನಾನ" ಮಾಡಿದ ಫಲವೂ ಬಂದಾಗಿದೆ

ಗಂಗಾಸ್ನಾನ - ತುಂಗಾಪಾನ ಎಂಬ ನಾಣ್ಣುಡಿಯಂತೆ ಗಂಗೆ ನೀರು ಸ್ನಾನಕ್ಕೆ ಯೋಗ್ಯವೆಂತಲೂ ತುಂಗೆ ನೀರು ಕುಡಿಯಲು ಸೂಕ್ತವೆಂಬುದಾಗಿ ತಿಳಿಸಲ್ಪಡುವುದರಿಂದ ಭಾರತೀಯ ಸಂಸ್ಕೃತಿಯಲ್ಲಿ ಸ್ನಾನಕ್ಕಿರುವ ಮಹತ್ವ ಮನದಟ್ಟಾಗುತ್ತದೆ

ಸ್ನಾನ" ಎಂದರೆ ದೇಹ - ಮನಸ್ಸನ್ನು ಚೆನ್ನಾಗಿ ತೊಳೆಯುವ ಕ್ರಿಯೆ ಎಂದು ಇದಕ್ಕೆ ಮಜ್ಜನ ಜಳಕ ಎಂಬುದಾಗಿಯೂ ಕರೆಯುತ್ತಾರೆ ಹಿಂದೂ ಜೀವನ ಸಂಸ್ಕೃತಿಯಲ್ಲಿ ಇದೊಂದು ನಿತ್ಯವೂ ಮಾಡಲೇಬೇಕಾದ ಆಚಾರ ಜೊತೆಗೆ ನಿತ್ಯವೂ ಬಿಡದೆ ಆಚರಿಸಲೇಬೇಕಾದ ಕರ್ಮಾಚರಣೆ ಶುಚಿರ್ಭೂತರಾಗಿ ಶ್ರದ್ಧೆಯಿಂದ ಯಾವ ಕರ್ಮವನ್ನು ಆಚರಿಸಿದರೂ ಇಹ-ಪರಗಳೆರಡರಲ್ಲೂ ಮೋಕ್ಷ ಸಂಪಾದಿಸಿಕೊಳ್ಳಬಹುದು ಬರೇ ಮೈಗಷ್ಟೇ ನೀರು ಸುರಿದು ಆಚಾರ-ವಿಚಾರ ವಂತರಾದರೆ ಸಾಲದು, ಉದಯಕಾಲದೊಳೆದ್ದು ಗಡಗಡನಡುಗುತ ನದಿಯಲ್ಲಿ ಮಿಂದೆವೆಂದು ಹೇಳುತ್ತಾ ಮದಮತ್ಸರ ಮೋಹ ಒಡಲಲ್ಲೇ ತುಂಬಿಟ್ಟು ಡಾಂಭಿಕವಾಗಿ ಆಚರಣೆ ಮಾಡಿದರೆ ಏನೂ ಫಲದೊರೆಯಲಾರದೆಂದು ದಾಸವರೇಣ್ಯ ಪುರಂದರದಾಸರು ಒಂದು ಕಡೆ ಹಾಡಿದ್ದಾರೆ ಹಾಗೇ ಸ್ನಾನವನ್ನು ಮಾಡದೆ ಯಾವ ಕರ್ಮವನ್ನು ಆಚರಿಸಿದರೂ ಪುಣ್ಯಪ್ರಾಪ್ತಿ ದೊರೆಯದೆಂದು ಅವರೇ ಭಕ್ತರಿಗೆ ಮತ್ತೊಂದೆಡೆ ಎಚ್ಚರಿಸುವುದನ್ನು ಮರೆತಿಲ್ಲ

ಪ್ರತಿನಿತ್ಯ ಬೆಳಗ್ಗೆ ತನ್ನ ಇತರ ಕ್ರಿಯೆಗಳಂತೆ "ಸ್ನಾನ"ವನ್ನು ಕೂಡ ನಿಷ್ಠೆ- ಸಮಯಕ್ಕನುಗುಣವಾಗಿ ಅನುಷ್ಠಾನಗೊಳಿಸಿಕೊಂಡರೆ ಅಂಥವರು ಬಲ, ತೇಜಸ್ಸು ಓಜಸ್ಸು ನೈರ್ಮಲ್ಯ-ತಪಸ್ಸು ಮೇಧಾಶಕ್ತಿ ಇಂದ್ರಿಯನಿಗ್ರಹ ಸುಖದುಖದಲ್ಲಿ ಸಮಭಾಗಿತ್ವದ ಜೊತೆ ಆಯುರಾರೋಗ್ಯ, ಐಶ್ವರ್ಯ ಸೌಭಾಗ್ಯ ಪ್ರಾಪ್ತವಾಗಿ ಪೂರ್ಣಚಂದ್ರನಂತೆ ಹೊಳೆಯುವವರಾಗುತ್ತಾರೆ

ಹಗಲು ನಾನಾ ಕರ್ಮಗಳಲ್ಲಿ ಭಾಗಿಯಾಗಿ ರಾತ್ರಿ ಮಲಗೇಳುವ ಹೊತ್ತಿಗೆ ಈ ದೇಹವೆನ್ನುವುದು ಮಲಿನದ ಮಡುವಾಗಿ ಅಪವಿತ್ರವಾಗಿರುತ್ತದೆ ಇಂಥ ಮಲಿನ ದೇಹವನ್ನು ಶುಚಿಗೊಳಿಸಿಕೊಳ್ಳಲು ಸ್ಮೃತಿ ಆಯುರ್ವೇದ ಆಕರ ಗ್ರಂಥಗಳಲ್ಲಿ ವಿವರಗಳಿವೆ

"ಗಂಗೇ ಚ ಯಮುನೇ ಚೈವ
ಗೋದಾವರಿ ಸರಸ್ವತೀ
ನರ್ಮದೇ ಸಿಂಧುಕಾವೇರಿ
ಜಲೇಸ್ಮಿನ್ ಸನ್ನಿಧಿಂಕುರು
ಪುಷ್ಕರಾದ್ಯಾನಿ ತೀರ್ಥಾನಿ
ಗಂಗಾದ್ಯಾ ಸರಿತಸ್ತದಾ
ಆಗಚ್ಛಂತು ಪವಿತ್ರಾಣಿ
ಸ್ನಾನಕಾಲೇ ಸದಾಮಮ

ಅಂದರೆ ಸ್ನಾನಮಾಡುವಾಗ ಬೇರೆ ಬೇರೆ ಆಲೋಚನೆಯಲ್ಲಿ ಮನಸ್ಸನ್ನು ತೊಡಗಿಸದೆ ಸ್ನಾನ ಮಾಡುವ ಸಮಯದಲ್ಲಿ ಈ ಮಂತ್ರವನ್ನು ಪಠಿಸುತ್ತಾ ನೀರನ್ನು ಬಳಸಬೇಕು ಗಂಗೆ ಯಮುನೆ ಗೋದಾವರಿ ಸಿಂಧು ಕಾವೇರಿ ಸರಸ್ವತಿಯರೇ ನೀವೆಲ್ಲ ನನ್ನ ಸ್ನಾನದ ನೀರಿನಲ್ಲಿ ನಿಮ್ಮ ಸನ್ನಿಧಾನವನ್ನಿಡಿ ಪುಷ್ಕರಿಣಿ ನೀರುಗಳು ನಾನು ಸ್ನಾನ ಮಾಡುವ ಈ ನೀರಿನಲ್ಲಿ ಬಂದು ಸೇರಲಿ ಎಂದು ಇದರ ಅರ್ಥ ಇಂಥ ಅರ್ಥಪೂರ್ಣ ಮಂತ್ರಗಳಸ್ನಾನದಿಂದ ನಮ್ಮ ದೇಹ ಪವಿತ್ರವಾಗುತ್ತದೆ

## ಸ್ನಾನಕ್ಕೆ ಸಕಾಲ -

ನಾವು ಮಾಡುವ ಪ್ರತಿಯೊಂದು ಕೆಲಸಕಾರ್ಯಗಳಿಗೂ ನಿಗದಿತವಾದ ಸಮಯವನ್ನು ಗೊತ್ತು ಮಾಡಿಕೊಂಡಿರುತ್ತೇವೆ ಅದರಂತೆ ಸ್ನಾನಕ್ಕೂ ಸಕಾಲವಿದೆ ಯತಿಗಳಿಗೆ, ಋತ್ವಿಜರಿಗೆ ಸ್ನಾನಕ್ಕೆ ಅನುಕೂಲವಾದ ಸಮಯ ಅರುಣೋದಯ"

ಸಾಧ್ಯವಾದಷ್ಟು ಬೆಳಗಿನ ಜಾವದಲ್ಲಿಯೇ ಎದ್ದು ಸ್ನಾನ ಮುಗಿಸಬೇಕು ಅನಿವಾರ್ಯವಾಗಿ ಬೆಳಗ್ಗೆ ಮುಂಚೆ ಸ್ನಾನಮಾಡಲು ಅನುಕೂಲವಾಗದೇ ಇದ್ದರೆ ಮಧ್ಯಾಹ್ನ ಊಟಮಾಡುವ ಮುನ್ನವಾದರೂ ಮಾಡಲೇಬೇಕು

ಇನ್ನು ಕೆಲವು ಸಮಯ ಶ್ರಮಿಕನ ಶ್ರಮದ ಮೇಲೆ ಸ್ನಾನದ ವೇಳೆಯನ್ನು ಬದಲಾಯಿಸಬೇಕಾಗುತ್ತದೆ ರೈತರು - ತೋಟದ ಕೆಲಸಗಾರರು ಮುಂತಾದವರು ತಮ್ಮ ದೇಹದಲ್ಲಿ ಹೊರಸೂಸುವ ಬೆವರಿನವಾಸನೆ ಮಲಿನತೆ ತೊಳೆಯಲೂ, ದೇಹದ ಲಘುತ್ವಕ್ಕಾಗಿಯೂ ಕೆಲಸ ಮುಗಿಸಿ ಸಂಜೆ ಸ್ನಾನ ಮಾಡುವ ಪರಿಪಾರವಿಟ್ಟುಕೊಳ್ಳುತ್ತಾರೆ ಅವರ ವೃತ್ತಿಗನುಸಾರವಾಗಿ ಹೊಂದಿಕೊಳ್ಳಬೇಕಾಗುವುದು ಅದನ್ನು ತಪ್ಪು ಎಂದು ಪರಿಗಣಿಸುವಂತಿಲ್ಲ ಸ್ನಾನಮಾಡದೆ ಇರಬಾರದಷ್ಟೆ !

ಗ್ರಹಣಕಾಲ ಸಂಕ್ರಾಂತಿಯಲ್ಲಿ ತೀರ್ಥಸ್ನಾನ ಮಾಡುವಾಗ ಅಶೌಚವಾದಾಗ, ಸೂತಕ-ಮೃತಕ (ಪುರುಡು) ಬಂದಾಗ ಸಮಯವನ್ನು ತಪ್ಪಿ ಸ್ನಾನ ಮಾಡುವ ಪರಿಸ್ಥಿತಿಯೂ ಬರುತ್ತದೆ ಇಂಥ ಕೆಲವೊಂದು ವಿಶೇಷ ಕಾರ್ಯಕ್ರಮಗಳನ್ನು ಹೊರತುಪಡಿಸಿ ಅಪ್ಪಿತಪ್ಪಿಯೂ ರಾತ್ರೆ ಸ್ನಾನ ಮಾಡುವ ವಿಧಿ ವಿಧಾನ ಒಳ್ಳೆತಲ್ಲ

ಸ್ನಾನಕ್ಕೆ ಮುಖ್ಯವಾಗಿ ಬೇಕಾದ ದ್ರವ್ಯ ನೀರೇ ಆಧಾರವಾದ್ದರಿಂದ ಆದಷ್ಟು ಶುಚಿಯಾದ ತಿಳಿಯಾದ ತಣ್ಣೀರು ಸ್ನಾನ ಅತಿಮುಖ್ಯ ತುಂಬಾ ಕೊರೆಯುವ ಚಳಿ ಇದ್ದರೆ, ಅಸೌಖ್ಯವಾದಾಗ ಹೂ ಬೆಚ್ಚಗಿನ ನೀರು ಒಳಿತು ಯಾವ ಕಾಲಕ್ಕೂ ಕುದಿಕುದಿ ನೀರನ್ನು ಸ್ನಾನಕ್ಕೆ ಬಳಸುವುದು ಹಿತವಲ್ಲ

ಗಜದಂತೆ ಗಂಟೆಯ ಪರಿಧಿ ಇಲ್ಲದೆ ಮುಳಗೇಳುವ ಸ್ನಾನವಾಗಲೀ, ಕಾಕಸ್ನಾನದಂತೆ ರೆಪ್ಪೆ ಬಡಿದು ಸ್ನಾನದ ಶಾಸ್ತ್ರವಾದಂತೆ ಮಾಡಲೂಬಾರದು ಹಿತಮಿತವಾದ ದೇಹಶುದ್ಧಿಯ ಸ್ನಾನವೇ ನಿಜವಾದ ಸ್ನಾನವಾದೀತು

ಮಂತ್ರಸ್ನಾನ, ಭೌಮಸ್ನಾನ, ಆಗ್ನೇಯಸ್ನಾನ, ವಾಯುವ್ಯಸ್ನಾನ ದಿವ್ಯಸ್ನಾನ ಧ್ಯಾನಸ್ನಾನ ಎಂಬ




# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು ತಿರುಪತಿ ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು ಸೋಮ ಮಂಗಳ ಬುಧ ಗುರು ಹಾಗೂ ಶನಿವಾರಗಳ ಕಾರ್ಯಕ್ರಮ | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5 00 ಪ್ರಾ 5 30 | ಪ್ರಾ ೫ ೦೦ ಪ್ರಾ 5 30 |
| ವಿಶ್ವರೂಪ ಸರ್ವದರ್ಶನ | ಪ್ರಾ 5 30 ಪ್ರಾ 6 00 | ಪ್ರಾ ೫ ೩೦ ಪ್ರಾ 6 00 |
| ತೋಮಾಲ ಕೊಲುವು ಪಂಚಾಂಗಶ್ರವಣ | ಪ್ರಾ 6 00 ಪ್ರಾ 6 30 | ಪ್ರಾ 6 00 ಪ್ರಾ 6 30 |
| ಸಹಸ್ರನಾಮಾರ್ಚನೆ | ಪ್ರಾ 6 30 ಪ್ರಾ 7 00 | ಪ್ರಾ 6 30 ಪ್ರಾ 7 00 |
| ಮೊದಲನೇ ಗಂಟೆ | ಪ್ರಾ 7 00 ಪ್ರಾ 7 30 | ಪ್ರಾ 7 00 ಪ್ರಾ 7 30 |
| ಸರ್ವದರ್ಶನ | ಪ್ರಾ 7 30 ಪ್ರಾ 10 00 | *ಅಭಿಷೇಕ ಪ್ರಾ 7 30 ಪ್ರಾ 8 30 |
| | | ಸಮರ್ಪಣ ಪ್ರಾ 8 30 ಪ್ರಾ 9 30 |
| 2ನೇ ಅರ್ಚನೆ 2ನೇ ಗಂಟೆ | ಪ್ರಾ 10 00 ಪ್ರಾ 10 30 | ಪ್ರಾ 9 30 ಪ್ರಾ 10 30 |
| * ಆರ್ಜಿತ | | ಕಲ್ಯಾಣೋತ್ಸವ ಪ್ರಾ 10 30 ಮ 12 00 |
| ಸರ್ವದರ್ಶನ | ಪ್ರಾ 10 30 ಸಂ 6 30 | ಪ್ರಾ 10 30 ಸಂ 6 30 |
| ರಾತ್ರಿ ಕೈಂಕರ್ಯ ರಾತ್ರಿ ಗಂಟೆ | ಸಂ 6 30 ರಾ 7 00 | ಸಂ 6 30 ರಾ 7 00 |
| ಸರ್ವದರ್ಶನ | ರಾ 7 00 ರಾ 8 45 | ರಾ 7 00 ರಾ 8 45 |
| ಏಕಾಂತ ಸೇವೆ | ರಾ 8 45 ರಾ 9 00 | ರಾ 8 45 ರಾ 9 00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ 200 00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ 100 00 |
| ಅರ್ಚನೆ (ಒಂದು ವರ್ಷಕ್ಕೆ) | ರೂ 42 00 |
| ಶಾಶ್ವತ ನಿತ್ಯಾರ್ಚನೆ | ರೂ 542 00 |

ದಾಗಿ ಕರ್ಮಕಾಂಡದಲ್ಲಿ ಆರು ಬಗೆಯ ಸ್ನಾನವನ್ನು ಗುರುತಿಸಿದ್ದಾರೆ

ಭಗವಂತನ ನಾಮಸ್ಮರಣೆ ಮಾಡುತ್ತಾ ಕಾಲಿನಿಂದ ಶರೀರದ ಎಲ್ಲಾ ಭಾಗಗಳಿಗೂ ನೀರನ್ನು ಪ್ರೋಕ್ಷಣೆ ಮಾಡಿಕೊಳ್ಳುವುದು ಮಂತ್ರಸ್ನಾನ

ಪುಂಡ್ರಧಾರಣೆ ಸ್ನಾನ ಅಥವಾ ಭೌಮಸ್ನಾನ ಎಂದರೆ ಗೋಪಿಚಂದನ, ತುಳಸಿಕಟ್ಟೆ ಬುಡದ ಮಣ್ಣು ನದೀ ಸಂಗಮಗಳ ಮೃತಿಕೆ ಯಾವುದಾದರೂ ಸರಿ ಇಂಥ ಮಣ್ಣನ್ನು ಮಂತ್ರ ಸಹಿತವಾಗಿ ನೀರಿನಲ್ಲಿ ಕಲಸಿ ಶರೀರದ ನಿರ್ದಿಷ್ಟ ಅಂಗಗಳ ಮೇಲೆ ಕ್ರಮವಾಗಿ ಲೇಪಿಸುವುದು

ವಿಭೂತಿಯನ್ನು ಮಂತ್ರ ಸಹಿತವಾಗಿ ನಿರ್ದಿಷ್ಟವಾದ ಸ್ಥಳ - ಆಕಾರಗಳಲ್ಲಿ ಮೈ ಮೇಲೆ ಲೇಪಿಸಿಕೊಳ್ಳುವುದು ಆಗ್ನೇಯಸ್ನಾನ

ಗೋಧೂಳನ್ನು (ಹಸುವಿನ ಗೊರಸುಗಳ ಕಾಲಿನಿಂದ ಎದ್ದ ಧೂಳು) ತಲೆಯ ಮೇಲೆ ಸಿಂಪಡಿಸಿಕೊಳ್ಳುವುದೇ ವಾಯುವ್ಯಸ್ನಾನ ಅಥವಾ ಗೋರಜ ಸ್ನಾನವೆನ್ನುವರು ಬಿಸಿಲು ಮಳೆಯಿಂದ ಕೂಡಿದ ಸ್ನಾನದಲ್ಲಿ ಮಿಾಯುವುದನ್ನು ದಿವ್ಯಸ್ನಾನವೆನ್ನುವರು

"ಅಪವಿತ್ರ ಪವಿತ್ರೋವಾ
ಸರ್ವಾವಸ್ಥಾಂ ಗತೋಪಿವಾ
ಯ ಸ್ಮರೇತ್ ಪುಂಡರೀಕಾಕ್ಷಂ
ಸಬಾಹ್ಯಭ್ಯಂತರ ಶುಚಿ

ಪುಂಡರೀಕ ಎಂದರೆ ಕಮಲ, ಅಕ್ಷ ಎಂದರೆ ಕಣ್ಣು, ಕಮಲದಂತೆ ಕಣ್ಣುಳ್ಳ ವಿಷ್ಣುವನ್ನು ಮೊದಲು ನಿಶ್ಚಲಮನದಿದ ಚಿಂತಿಸುವುದೇ ಧ್ಯಾನ ಸ್ನಾನ ಎಂಬುದಾಗಿ ಲೌಕಿಕರು ಗುರುತಿಸುತ್ತಾರೆ ಪವಿತ್ರನಾಗಿರಲಿ ಅಪವಿತ್ರರೇ ಆಗಿರಲಿ, ಅಂಥವರು ಭಕ್ತಿಯಿಂದ ಪುಂಡರೀಕಾಕ್ಷನನ್ನು ಧ್ಯಾನಿಸಿಬಿಟ್ಟರೆ ಒಳಗೂ ಹೊರಗೂ ಶುದ್ಧವಾದ ಹಾಗೇ

ಇನ್ನು ಕೆಲವು ಸಾರಿ ನೀರಿನಸ್ನಾನ ಮಾಡಿದ ಮೇಲೆ ಮಂತ್ರ ಸಹಿತವಾದ ಪ್ರೋಕ್ಷಣೆ ಸ್ನಾನ ಮಾಡಿಕೊಂಡೇ ಸತ್ ಕರ್ಮಕಾರ್ಯದಲ್ಲಿ ತೊಡಗುವರು ಹೋಮ - ಹವನಾದಿ ಮಾಡುವಾಗ ಪಂಚಗೋಮ ಹಾಕಿ ಮನೆಯನ್ನು ಶುದ್ಧಿಮಾಡುವುದೂ ಸ್ನಾನದ ಒಂದು ಕ್ರಿಯೆಯೇ

## ಸ್ನಾನಕ್ಕೆ ಯೋಗ್ಯವಾದ ನೀರು

ನೆಲ ನೀರು ಗಾಳಿ ಮುಂತಾದವು ಬದುಕಿಗೆ ಆಧಾರ ಎಲ್ಲಕ್ಕೂ ಜೀವಾಧಾರವಾದ ನೀರನ್ನು

ಅಷ್ಟೇ ಮುಚ್ಚಟೆಯಾಗಿ ಕಾವಾಡಿಕೊಂಡು ಬರುವುದು ಮಾನವನ ಧರ್ಮ – ಸ್ನಾನಕ್ಕಂತೂ ನೀರೇ ಆಧಾರ ಸ್ನಾನಕ್ಕೆ ಬಾವಿನೀರಿಗಿಂತ ಝರಿ, ಚಿಲುಮೆಯ ನೀರೇ ಶ್ರೇಷ್ಠವಾದರೂ ಎಲ್ಲರಿಗೂ ಆ ಸೌಲಭ್ಯ ದೊರೆಯಲು ಸಾಧ್ಯವಿಲ್ಲ ವಿಶಾಲವಾಗಿ ನಿಂತ ಸರೋವರದ ನೀರು ಹರಿಯುವ ನೀರಿನ ಸ್ನಾನ ಮಾಡಿದರೆ ಸುಕೃತ ಪುಣ್ಯಲಭಿಸುವುದು

ಹಿಂದೊಮ್ಮೆ ಒಬ್ಬ ಸ್ತ್ರೀ ಕಾಶಿಗೆ ಹೋದಾಗ ಗಂಗೆ ನದಿಯಲ್ಲಿ ಮಿಾಯುತ್ತಾ ಅಯ್ಯೋ ಇದರಲ್ಲಿ ಏನು ವಿಶೇಷವಿದೆ ನಮ್ಮಮನೆ ಅಬ್ಬಿ ನೀರು ಹೀಗೆ ಇರುತ್ತದೆ" ಎಂದೇ ಹೀಗಳೆದು ಸ್ನಾನ ಮಾಡಿದಳಂತೆ ಅವಳ ದೃಷ್ಟಿಯಲ್ಲಿ ಎಲ್ಲಾ ನೀರು ಒಂದೇ ಎಂದಾದರೂ ಅದು ಸಲ್ಲದು – ನಮ್ಮ ಮನೆಯಲ್ಲಿ ಸ್ನಾನಮಾಡುತ್ತಿರಲಿ ಪವಿತ್ರ ಪುಷ್ಕರಿಣಿಯಲ್ಲಿ ಸ್ನಾನ ಮಾಡುತ್ತಿರಲಿ ಪವಿತ್ರ ತೀರ್ಥವೆಂಬ ಭಾವನೆಯಿಂದ ಮಾಡಬೇಕು ಅವರವ ದರುಶನಕೆ ಅವರವರ ಭಾವಕ್ಕೆ ಇರುತಿಹನು ಶಿವಯೋಗಿ ಎನ್ನುವಂತೆ ಭಾವನೆಗೆ ತಕ್ಕ ಫಲ ಲಭ್ಯ

ಕೆಲವೊಂದು ವಿಶೇಷ ಮಾಸಗಳಲ್ಲಿ ಸ್ನಾನಕ್ಕೆ ಮಹತ್ವವನ್ನು ಪೂರ್ವಿಕರು ನಿಗದಿ ಪಡಿಸಿದ್ದಾರೆ ಪುಷ್ಕರ ಸರೋವರ ರಾಜಾಸ್ಥಾನದಲ್ಲಿ ಅಜಮೇರಿನ ಬಳಿ ಇದೆ ಇಲ್ಲಿ ಕಾರ್ತೀಕ ಪೂರ್ಣಿಮೆಯಂದು ಪುಷ್ಕರಿಣಿ ಸ್ನಾನ – ಜಾತ್ರೆಯೇ ನಡೆಯುತ್ತದೆ ಪ್ರಯಾಗದ ತ್ರಿವೇಣಿ ಸಂಗಮದಲ್ಲಿ ಮಕರ ಮಾಸದಸ್ನಾನ, ಕಾವೇರಿ ನದಿಗೆ ತುಲಾಮಾಸ – ಹಿಮಾಲಯದ ಮಾನಸ ಸರೋವರ ತಿರುಪತಿಯ ಬೆಟ್ಟದ ಮೇಲಿನ ಸ್ವಾಮಿ ಪುಷ್ಕರಿಣಿ – ಸಮುದ್ರಸ್ನಾನಕ್ಕೆ ಅಮಾವಾಸ್ಯೆ – ಸಂಕ್ರಮಣ ಮುಂತಾದ ಪರ್ವದಿನಗಳನ್ನು ನಿರ್ದಿಷ್ಟವಾಗಿ ಗೊತ್ತುಪಡಿಸಿದ್ದಾರೆ

ನಾವು ಯಾವುದೇ ಕಾರ್ಯಗಳನ್ನು ಕೈಗೊಳ್ಳುವಾಗಲೂ ಸಂಕಲ್ಪ ಸ್ತುತಿ, ಅರ್ಘ್ಯಗಳೆಂಬ ಧಾರ್ಮಿಕ ವಿಧಿವಿಧಾನದಿಂದ ಪವಿತ್ರ ಕಾರ್ಯವನ್ನು ನಡೆಸಬೇಕು ನಮ್ಮ ಇಷ್ಟಾರ್ಥಸಿದ್ಧಿಗಾಗಿ ಇಂಥ ತೀರ್ಥದಲ್ಲಿ ಅವಗಾಹನ ಸ್ನಾನ ಮಾಡುತ್ತೇವೆಂದು ಸಂಕಲ್ಪಿಸಿಕೊಳ್ಳಬೇಕು

"ಸ್ತುತಿ" ನಾವು ಎಲ್ಲೇ ಹೇಗೇ ಸ್ನಾನ ಮಾಡಲಿ ಅಲ್ಲಿ ಗಂಗೆ ಸಾನ್ನಿಧ್ಯವಿದೆ – ಎಂದರಿತು ಗಂಗಾಸ್ತುತಿ ಮಾಡುತ್ತಾ (ನಾವು ಮಾಡುತ್ತಿರುವ ಸ್ಥಳದ ಮಹಿಮೆಗೆ ಒತ್ತುಕೊಟ್ಟು) ಸ್ನಾನಮಾಡಬೇಕು

ನದಿ ಸಮುದ್ರ, ಝರಿ ಮುಂತಾದ ಕಡೆ ಗಂಗೆ ಸ್ತುತಿಸಿ ಮೂರು ಸಲ ಮುಳುಗೇಳಬೇಕು ನೀರಿನಲ್ಲೇ ನಿಂತುಕೊಂಡು ದೇವತೆಗಳು – ಋಷಿ ಪಿತೃಗಳಿಗೆ ನೀರಿನಿಂದ ಅರ್ಘ್ಯಕೊಡಬೇಕು ಆನಂತರ ಶುದ್ಧ ವಸ್ತ್ರಧರಿಸಿ ನೀರಿನಿಂದಲೇ ಇಷ್ಟದೇವತೆಯ ಪೂಜೆ ಮಾಡಬೇಕು ಇಂತಹ ಸ್ನಾನವು ಇಹಪರಕ್ಕೂ ಶ್ರೇಯಸ್ಕರ

ಋಗ್ವೇದ ಸ್ಮೃತಿ ಪುರಾಣಗಳು ಮಹಾಭಾರತ ರಾಮಾಯಣದಲ್ಲೂ ಸ್ನಾನದ ಮಹತ್ವವನ್ನು ಮನದಟ್ಟು ಮಾಡಿಕೊಟ್ಟಿದ್ದಾರೆ ಮಹಾಭಾರತದ ಅರಣ್ಯಪರ್ವದಲ್ಲಿ ಲೋಮಶ ಎಂಬ ಮಹರ್ಷಿಯು ಧರ್ಮರಾಯನಿಗೆ ಅನೇಕ ಪುಣ್ಯಕ್ಷೇತ್ರಗಳು ತೀರ್ಥಕ್ಷೇತ್ರಗಳನ್ನು ಪರಿಚಯಿಸಿ ಅಂಥ ಸ್ಥಳಕ್ಕೆ ಹೋಗಿ ಸ್ನಾನ ದಾನಾದಿಗಳನ್ನು ಮಾಡೆಂದು ಉಪದೇಶಿಸಿದಾಗ ಪಾಂಡವರೆಲ್ಲರೂ ಮಹರ್ಷಿಯ ಮಾತನ್ನು ಪಾಲಿಸುತ್ತಾರೆ

ತಾನು ಸ್ನಾನಕ್ಕೆ ಹೋಗುವುದಕ್ಕಾಗಿ ಬೆಂಗಾವಲಾಗಿ ತನ್ನ ಮೈಯ ಕೊಳೆಯಿಂದಲೇ ಗಣಪತಿಯನ್ನು ಮಾಡಿ ಆತನನ್ನು ಬಾಗಿಲಲ್ಲಿ ಕೂರಿಸಿ ಸ್ನಾನಕ್ಕೆ ಹೋದ ಪಾರ್ವತಿಯಿಂದಾಗಿ ಆದಿ ಪೂಜಿತನ ಹುಟ್ಟು ಆನೆಯ ಸೊಂಡಿಲಿನ ರೂಪ ಬಂದಿದ್ದು ಈ ಸ್ನಾನದ ಮಹಿಮೆಯಿಂದಲೇ

ಹಿಂದೂಗಳು ಮನೆಯ ದೇವರನ್ನು ಪ್ರತಿನಿತ್ಯವೂ ನೀರಿನಿಂದ ಅಭಿಷೇಕ ಮಾಡಿ ಗಂಧ – ಪುಷ್ಪಗಳಿಂದ ಅಲಂಕರಿಸುವುದೂ ಕೂಡ ದೇವತೆಗಳಿಗೆ ನೀಡುವ ಸ್ನಾನದ ಸಾಂಕೇತಿಕತೆ

ಭಾರತೀಯರು ಪ್ರತಿನಿತ್ಯ ಸ್ನಾನಕ್ಕೆ ಮಹತ್ವ ಕೊಟ್ಟಹಾಗೆ ಪಾಶ್ಚಿಮಾತ್ಯರೂ ಕೂಡ ಸ್ನಾನಕ್ಕೆ ಮಹತ್ವ ಕೊಡುವುದಿಲ್ಲ ಆದರೆ ಅವರು ಕೆಲವೊಂದು ವಿಚಿತ್ರ ನಡವಳಿಕೆಯೊಂದಿಗೆ ತಮ್ಮ "ಸ್ನಾನ ವನ್ನು ಪೂರೈಸುತ್ತಾರೆಂದರೆ ಆಶ್ಚರ್ಯವಾಗದಿರದು

ಯುರೋಪ್ ಖಂಡದಲ್ಲಿ ಪ್ರಾಚೀನ ಕಾಲದಿಂದಲೂ ಸಾರ್ವಜನಿಕ ಸ್ನಾನಗೃಹಗಳೇ ಇರುತ್ತವೆಯಂತೆ ಭಾರತದಲ್ಲಿರುವಂತೆ ಪ್ರತಿಯೊಬ್ಬರ ಮನೆಯಲ್ಲೂ ಬಚ್ಚಲು ಮನೆಗಳಿರುವುದಿಲ್ಲ ಸಾರ್ವಜನಿಕ ಸ್ನಾನಗೃಹಗಳು ಪುರಸಭೆಯವರ ನೇತೃತ್ವದಲ್ಲಿ ಇರುತ್ತವೆ ಸ್ನಾನಕ್ಕಾಗಿ ನಿಗದಿಪಡಿಸಿದ ಹಣ ಕೊಟ್ಟು ಸ್ನಾನಮಾಡುತ್ತಾರೆ ಹದಿನಾರನೇ ಶತಮಾನದ ಅರಸರ ಕಾಲದಲ್ಲೂ ವಾರಕ್ಕೊಮ್ಮೆ ಸ್ನಾನ ಮಾಡುವ ಪದ್ಧತಿ ಇರಲಿಲ್ಲವಂತೆ ಇನು ವಿಚಿತ್ರವೆಂದರೆ ಫ್ರಾನ್ಸ್ ದೇಶದ ನಾಲ್ಕನೆಯ ಹನ್ರಿ ಸ್ನಾನ ಮಾಡುವಾಗ ಡಾಕ್ಟರರು ಅಲ್ಲಿ ಹಾಜರಾಗಿರಬೇಕಾಗಿತ್ತಂತೆ ಅಂದು ಸ್ನಾನಮಾಡಿದರೆ ಅಪಾಯವೆಂದೇ ಜನರ ತಿಳುವಳಿಕೆಯಾಗಿತ್ತಂತೆ ಪಾಶ್ಚಾತ್ಯದೇಶದಲ್ಲಿ ಅನೇಕ ಶಾಲೆಗಳಲ್ಲಿ ಸ್ನಾನಮಾಡುವದಿನ ಇಂಥದಿನ ಎಂದು ವೇಳಾಪಟ್ಟಿಯಲ್ಲಿ ಸೇರಿಸುತ್ತಿದ್ದರಂತೆ

ಆದರೆ ಅದೇ ಭಾರತೀಯರಿಗೆ ಸ್ನಾನವೆಂದರೆ ಅಷ್ಟೇ ಸುಲಭವೂ ಸರಳವೂ ಆದ ಕ್ರಿಯೆ ಎಂದರೆ ತಪ್ಪಿಲ್ಲ ಹಲ್ಲಿ ಮೈಮೇಲೆ ಬಿದ್ದಾಗ ಅಪಶಕುನವೆಂದು ಮೈ ತೊಳೆದುಕೊಳ್ಳುವುದು, ಸ್ತ್ರೀಯರು ಋತುಮತಿಯಾದಾಗ ವಿಶೇಷ ಸ್ನಾನವೂ ಆಮೇಲೆ ಪ್ರತಿ ತಿಂಗಳೂ ಮುಟ್ಟಾಗಿ ಮಿಂದು ಐದನೇದಿನ ಐನೀರು ಸ್ನಾನವೆಂದು ಮಾಡಿಯೇ ಮಾಡುತ್ತಾರೆ ಅಕಸ್ಮಾತ್ ಮದುವೆ ಹೆಣ್ಣಿನ ತಾಯಿ ಮಗಳ ಮದುವೆಯಂದೇ ಸ್ನಾನ (ಒಳಬರುವುದು) ಪಾದರೆ ಶುದ್ಧಕ್ಕಾಗಿ ಸಾಣಿಗೆಯಿಂದ ನೀರನ್ನ ಹಾಕಿಕೊಂಡು ನೂರೆಂಟು ಸ್ನಾನಕೂಡ ಮಾಡುವರು ದೀಪಾವಳಿಯಂದು ಅಭ್ಯಂಜನಸ್ನಾನ, ಸಂಕ್ರಾಂತಿಯಂದು ತೈಲಾಭ್ಯಂಜನ ಸ್ನಾನ ಕೂಡ ವಿಶೇಷ ಮಹತ್ವ ಪಡೆದಿವೆ ಮದುವೆ – ಮಂಜಿಗಳಲ್ಲಿ ಮಂಗಲಸ್ನಾನ ಕೂಡ ಮಂಗಲಕರವಾದದ್ದೆ

ಸ್ನಾನದ ಬಗ್ಗೆ ಬರೆಯುವಾಗ ಆರ್ಕಿಮಿಡೀಸನ ಸ್ನಾನದ ಬಗ್ಗೆ ಬರೆಯದೆ ಇರುವಂತಿಲ್ಲ ಗ್ರೀಕಿನ ವಿಜ್ಞಾನಿಯಾದ ಈತನು ತಿಳಿಯಿತು, ತಿಳಿಯಿತು ಎಂದು ತನ್ನ ಪ್ರಯೋಗದ ಸಂಶೋಧನೆಯ ಬಗ್ಗೆ ಸಂಕಲ್ಪ ಮಾಡಿದ್ದಲ್ಲವೆ? ಸುಪ್ರಸಿದ್ಧ ವೈದ್ಯರೂ ಕೂಡ ಸಂಜೆ ಸ್ನಾನ ಮಾಡುವುದರಿಂದ ಉತ್ತಮ ನಿದ್ರೆಯೂ ದೀರ್ಘಾಯುಷ್ಯವೂ ಲಭಿಸುತ್ತದೆ ಎನ್ನುವರು ಆಯುರ್ವೇದದಲ್ಲಿ ಕೆಲವು ಕಾಯಿಲೆಗಳಿಗೆ ಕಟಿಸ್ನಾನ ಪರ್ಯಾಯಸ್ನಾನ ಹಬೆಸ್ನಾನ ಇನ್ನು ಮುಂತಾದ ಸ್ನಾನೋಪಚಾರದಿಂದ ಮಹತ್ತರವಾದ ಕಾಯಿಲೆಯನ್ನು ವಾಸಿ ಮಾಡಬಹುದೆಂದಿದೆ ಸೂರ್ಯಸ್ನಾನ ಮಕ್ಕಳ ರಿಕೆಟ್ಸ್ ಕಾಯಿಲೆಗೆ ರಾಮಬಾಣ

ಹೀಗೆ ಆರ್ಕಿಮಿಡೀಸನಿಂದ ಆಧುನಿಕ ಮಾನವನವರೆಗೆ ವ್ಯಾಪಿಸಿರುವ ಈ ಸ್ನಾನದ ಹಿರಿಮೆ ಗರಿಮೆಗಳು ಮನುಕುಲದಷ್ಟೇ ಹಳೆಯದು ಇಂದಿ ಕಾಲಕ್ಕೂ ಸಲ್ಲುವಂಥದ್ದು





ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ-

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ ತಿ ದೇ ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸಬೇಕು ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗದಿ ಆಗಿರುವ ದತ್ತಿಯ ಮೌಲ್ಯ ರೂ 3 ಲಕ್ಷ ಇದರಲ್ಲಿ ಶುಕ್ರವಾರದ ಅಬಿಷೇಕವೂ ಸೇರುವುದು

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ ಸಹಸ್ರನಾಮಾರ್ಚನೆ, ಏಕಾಂತ ಸೇವೆಗಳು ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ವೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ

  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದು ಬಾರಿಗೆ 10 ಶತಾಂಶ) ನಂತೆ, ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ ತಿ ದೇ ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು) ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ ಬರೆಯಿರಿ

**ಕಾರ್ಯನಿರ್ವಹಣಾಧಿಕಾರಿ**

ತಿ ತಿ ದೇ ತಿರುಪತಿ

## ವಾರ್ತಾಲಹರಿ

### ವೈಭವೋಪೇತವಾಗಿ ನಡೆದ ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವ

ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ಪ್ರತಿವರ್ಷದಲ್ಲಿ ಕಾರ್ತೀಕ ಮಾಸದಲ್ಲಿ ನಡೆಯುವ ಕಾರ್ತೀಕ ಬ್ರಹ್ಮೋತ್ಸವ ಈ ಬಾರಿ ಡಿಸೆಂಬರ್ 2 ರಿಂದ 11 ರವರೆಗೆ ಹತ್ತು ದಿನಗಳ ಕಾಲ ವೈಭವೋಪೇತವಾಗಿ ಅತ್ಯಂತ ಹೆಚ್ಚಿನ ಭಕ್ತರ ಆನಂದೋತ್ಸಾಹಗಳ ನಡುವೆ ಯಶಸ್ವಿಯಾಯಿತು ಬ್ರಹ್ಮೋತ್ಸವದ ಅಂಗವಾಗಿ ನಡೆದ ವಿವಿಧ ವಾಹನ ಸೇವೆಗಳಲ್ಲಿ ಊರಮೆರವಣಿಗೆಗಳಲ್ಲಿ ಹೆಚ್ಚು ಮಂದಿ ಭಕ್ತರು ಸೇರುತ್ತಿದ್ದದ್ದು ಕಂಡುಬಂದಿತು 7-12-91 ರಂದು ನಡೆದ ಗಜ ವಾಹನೋತ್ಸವದಲ್ಲೂ 8-12-91 ರಲ್ಲಿ ನಡೆದು ಯಶಸ್ವಿಯಾದ ಗರುಡ ವಾಹನದ ಮೆರವಣಿಗೆಯಲ್ಲೂ ಅಮ್ಮನವರನ್ನು ಬಹುಮಂದಿ ಭಕ್ತರು ಬಳಿಯಿಂದ ದರ್ಶಿಸಿ ಆನಂದಿಸಿದರು ಮಂಗಳವಾರದಂದು ನಡೆದ ರಥೋತ್ಸವದಲ್ಲಿ ಗೋವಿಂದ ನಾಮಸ್ಮರಣೆಯಲ್ಲಿ ತಲ್ಲೀನರಾದ ಭಕ್ತರ ಆನಂದಾತಿಶಯಕ್ಕೆ ಪಾರವಿರಲಿಲ್ಲವಾಗಿದ್ದಿತು

11-12-91 ರಂದು ಬ್ರಹ್ಮೋತ್ಸವದ ಕೊನೆಯ ದಿನ ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ ಪುಷ್ಕರಿಣಿಯಲ್ಲಿ ಚಕ್ರಸ್ನಾನ ಅಂದು ತಿರುಮಲೆಯ ಸ್ವಾಮಿ ವೆಂಕಟೇಶ್ವರನ ಸನ್ನಿಧಿಯಿಂದ ಅಮ್ಮನವರಿಗೆ ಹರಿದ್ರಾ-ಕುಂಕುಮ ತುಲಸೀ ಮಾಲೆ ರೇಷ್ಮೆ ವಸ್ತ್ರಗಳನ್ನು ಕಳುಹಿಸ ಕೊಡಲಾಗುವುದು ವೇದ ಮಂತ್ರಗಳೊಡನೆ ಆನೆಯ ಮೇಲಣ ಅಂಬಾರಿಯಲ್ಲಿ ಆಗಮಿಸುವ ಈ ಸ್ವಾಮಿ ಕಾಣಿಕೆಯನ್ನು ಅಮ್ಮನವರಿಗೆ ನಿವೇದಿಸಿದ ನಂತರ ಅಮ್ಮನವರನ್ನೂ ಚಕ್ರವನ್ನೂ ಊರಮೆರವಣಿಗೆಯಲ್ಲಿ ಆಲಯ ಪುಷ್ಕರಿಣಿಗೆ ಬಿಜಯಗೈಸಿ ಅಲ್ಲಿ ಚಕ್ರಸ್ನಾನ - ಆ ಸಮಯದಲ್ಲಿ ಆಲಯ ಪುಷ್ಕರಿಣಿಯಲ್ಲಿ ಸ್ನಾನಮಾಡಿ ಪುನೀತರಾಗಲು ನಾ ಮುಂದು ತಾ ಮುಂದು ಎನ್ನುವ ಭಕ್ತಜನ ಸಂದೋಹ ಹಿಂದೆಂದೂ ಇಲ್ಲದಷ್ಟು ಹೆಚ್ಚಿಗೆ ಸೇರಿದ್ದಿತು ಹೆಚ್ಚಿನ ಭಕ್ತರಿಗಾಗಿ ತಿರುಪತಿಯಿಂದ ತಿರುಚಾನೂರಿಗೆ ರಸ್ತೆದಾರಿಗೆ ಸೌಲಭ್ಯವನ್ನು ಹೆಚ್ಚು ಗೊಳಿಸಲಾಗಿದ್ದಿತು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್ ತಿ ತಿ ದೇ ಧರ್ಮಕರ್ತರ ಮಂಡಳಿಯ ಸದಸ್ಯೆ ಶ್ರೀಮತಿ ದಾಸರಿ ಪದ್ಮ ವಿಶೇಷ ದರ್ಜೆಯ ಡೆ ಇ ಓ ಶ್ರೀ ಆರ್ ವಾಸುದೇವನಾಯುಡು ಮೊದಲಾದವರು ತಿರುಚಾನೂರು ಪುರ ಪ್ರವೇಶ ದ್ವಾರದಲ್ಲಿಯೇ ತಿರುಮಲೆಯಿಂದ ಆಗಮಿಸಿದ ಸ್ವಾಮಿ ಕಾಣಿಕೆಗಳ ಗಜರಾಜನನ್ನು ಮಂಗಳ ವಾದ್ಯಗಳೊಡನೆ ಸ್ವಾಗತಿಸಿ ಆಲಯಕ್ಕೆ ಕರೆದುಕೊಂಡು ನಡೆದರು ಹಿಂದೆಯೇ ಭಕ್ತಜನ ಸಮೂಹವೂ ಗೋವಿಂದ ನಾಮಸ್ಮರಣೆಯಲ್ಲಿ ಹೆಜ್ಜೆ ಹಾಕತೊಡಗಿತು ಆಲಯದಲ್ಲಿ ಶ್ರೀ ಪದ್ಮಾವತೀ ಅಮ್ಮನವರಿಗೆ ಇವನ್ನೆಲ್ಲ ಶಾಸ್ತ್ರೋಕ್ತವಾಗಿ ಒಪ್ಪಿಸಲಾಯಿತು ಚಕ್ರಸ್ನಾನದ ನಂತರ ಅಂದು ಸಂಜೆ ಧ್ವಜಾವರೋಹಣದಿಂದ ಬ್ರಹ್ಮೋತ್ಸವ ಕಾರ್ಯಕ್ರಮ ಮುಕ್ತಾಯವಾಯಿತು

### ತಿರುಚಾನೂರಿನಲ್ಲಿ ಊಂಜಲ್‌ಸೇವೆ

ತಿ ತಿ ದೇ ಗಳ ಆಡಳಿತದ ಕಕ್ಷೆಯಲ್ಲಿ ಬರುವ ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ಹೊಸದಾಗಿ ಊಂಜಲ್ ಸೇವೆಯನ್ನು ಆರ್ಜಿತ ಸೇವೆಯನ್ನಾಗಿ ಪ್ರವೇಶಗೊಳಿಸಲಾಗಿದ್ದು, ಡಿಸೆಂಬರ್ 20 ರಂದು ಕಾರ್ಯ

# ತಿರುಮಲೆ ತಿರುಪತಿ ದೇವಸ್ಥಾನಗಳು,

## ತಿರುಪತಿ

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಎಂ ವಿ ಎಸ್ ಪ್ರಸಾದ್ ಐ ಎ ಎಸ್,
ಕಾರ್ಯನಿರ್ವಹಣಾಧಿಕಾರಿ

ಪ್ರಿಯ ಭಕ್ತ ಬಂಧುಗಳೆ

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ ವೇದಕಾಲ ದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ ಆಹಾರವನ್ನು ನೀಡಿದವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ ೧೯೮೫ ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ ಭಾರತಾ ದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ

ಭೋಜನದ ಗುಣಮಟ್ಟವೂ ಉತ್ಕೃಷ್ಟತೆಯೂ ಸಾರ್ವಜನಿಕರ ಶ್ಲಾಘನೆಗೆ ಪಾತ್ರ ವಾಗಿದೆ ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ

ನಿತ್ಯ ಅನ್ನದಾನಯೋಜನೆಯಲ್ಲಿ ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿ ಗೆಯನ್ನು ಸಲ್ಲಿಸುವುದರ ಮೂಲಕ ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ ತಿ ದೇವಸ್ಥಾನಗಳು ಈಚೆಗೆ ನಿರ್ಧರಿ ಸಿದೆ ತಾವು ರೂ ೧೦೦೦ ಅಥವಾ ಗುಣಕಗಳಲ್ಲಿ ದಾನ ಮಾಡಿದರೂ ಸಾಕು ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂ ಪರೆಯಾದ ಅನ್ನದಾನಯೋಜನೆಯನ್ನು ತಿ ತಿ ದೇ ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ

ದೂರದೂರಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ ಪರಿಷ್ಕೃತವಾದ ನಿತ್ಯ ಅನ್ನದಾನಯೋಜನೆಯಲ್ಲಿ ಸೇರಿ ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ

ಅನ್ನೇಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿ
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿ

ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ ಅನ್ನದಾನ ಲೌಕಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ ಹಾಗಾಗಿ ಅನ್ನದಾನ ಮಾಡ ಬೇಕು

ಬೋಧಾಯನ ಧರ್ಮಸೂತ್ರ

ವಂದನೆಗಳೊಡನೆ ತಮ್ಮ ವಿಶ್ವಾಸಿ
(ಎಂ ವಿ ಎಸ್ ಪ್ರಸಾದ್)

ನಿರ್ವಹಣಾಧಿಕಾರಿ ಶ್ರೀ ಎಂ ವಿ ಎಸ್ ಪ್ರಸಾದರು ಲಾಂಛನ ಪ್ರಾಯವಾಗಿ ಈ ಹೊಸ ಸೇವೆಯನ್ನು ಆರಂಭಿಸಿದರು ಪ್ರತಿನಿತ್ಯ ನಡೆಯುವ ಈ ಸೇವೆಯಲ್ಲಿ ಪಾಲುಗೊಳ್ಳ ಬಯಸುವ ಭಕ್ತರು 116 ರೂಪಾಯಿಗಳ ಶುಲ್ಕ ಸಲ್ಲಿಸಬೇಕಾಗುತ್ತದೆ ಒಂದೇ ಬಾರಿಗೆ 900 ರೂಗಳ ದೇಣಿಗೆ ನೀಡಿದರೆ ಅದನ್ನು ಬ್ಯಾಂಕಿನಲ್ಲಿ ಠೇವಣಿ ಮಾಡಿ ಬರುವ ಬಡ್ಡಿಯಿಂದ ವರ್ಷಕ್ಕೆ ಒಮ್ಮೆ ಭಕ್ತರ ಹೆಸರಿನಲ್ಲಿ ಈ ಸೇವೆಯನ್ನು ನಡೆಸಲಾಗುವುದು ಎಂದು ತಿ ತಿ ದೇ ಪೌರ ಸಂಬಂಧ ಶಾಖಾಧಿಕಾರಿ ಡಾ|| ಆರ್ ಸೂರ್ಯನಾರಾಯಣ ಮೂರ್ತಿ ಅವರು ತಿಳಿಸಿದರು ಈ ಸೇವೆಯನ್ನು ನಡೆಸುವ ದಿನದಂದು ಸೇವಾಕರ್ತರ ಕುಟುಂಬದ ಐದು ಮಂದಿಯನ್ನು ಅನುಮತಿಸಲಾಗುವುದು ದೇದೀಪ್ಯಮಾನವಾಗಿ ಬೆಳಗುವ ದೀಪಗಳ ನಡುವೆ ಅಮ್ಮನವರನ್ನು ವಿವಿಧಾಭರಣಗಳಿಂದ ಅಲಂಕರಿಸಿ ಶಾಸ್ತ್ರೋಕ್ತವಾಗಿ ಆರಂಭಿಸಿದ ಈ ಸೇವೆಯಲ್ಲಿ ತಿ ತಿ ದೇ ಸಂರಕ್ಷಣಾಧಿಕಾರಿ ಶ್ರೀ ಎಂ ವೈ ಎಸ್ ಎನ್ ಶರ್ಮ ಅವರು ಪಾಲುಗೊಂಡಿದ್ದರು

## ಮುಖ್ಯಮಂತ್ರಿಯಿಂದ ವಾರಶಾಲಾ ಭವನ ನಿರ್ಮಾಣಕ್ಕೆ ಶಂಕುಸ್ಥಾಪನೆ

ಆಂಧ್ರಪ್ರದೇಶದ ಮುಖ್ಯ ಮಂತ್ರಿ ಶ್ರೀ ಎನ್ ಜನಾರ್ದನರೆಡ್ಡಿ ಅವರು ಡಿಸೆಂಬರ್ 22 ರಂದು ತಿರುಪತಿಗೆ ಆಗಮಿಸಿ ಹಲವಾರು ಶಂಕುಸ್ಥಾಪನೆಗಳನ್ನೂ ಆರಂಭ ಉತ್ಸವಗಳನ್ನು ನಡೆಸಿಕೊಟ್ಟರು ತಿರುಪತಿಯ ಕಪಿಲತೀರ್ಥ ರಸ್ತೆಯಲ್ಲಿನ ಎಸ್ ವಿ ಪ್ರಾಚ್ಯ ಕಲಾಶಾಲೆಯ ಆವರಣದಲ್ಲಿ 65 ಲಕ್ಷ ರೂಪಾಯಿಗಳ ವೆಚ್ಚದಲ್ಲಿ ನಿರ್ಮಾಣವಾಗಲಿರುವ ಶ್ರೀ ಗೋವಿಂದರಾಜಸ್ವಾಮಿ ವಾರಶಾಲಾ ಭವನಕ್ಕೆ ಅಡಿಗಲ್ಲನ್ನು ನೆಟ್ಟರು ಇದಕ್ಕೂ ಮೊದಲು ತಿ ತಿ ದೇ ಗಳ ನೆರವಿನಿಂದ ತಿರುಪತಿಯ ರೂಯಾ ಆಸ್ಪತ್ರೆಯಲ್ಲಿ 35 ಲಕ್ಷ ರೂಗಳ ವೆಚ್ಚದಲ್ಲಿ ನಿರ್ಮಾಣವಾಗಲಿರುವ ಮಾನಸಿಕ ರೋಗಿಗಳ ಚಿಕಿತ್ಸಾ ವಿಭಾಗದ ಕಟ್ಟಡಕ್ಕೆ ಶಂಕುಸ್ಥಾಪನೆ ಮಾಡಿದರು

## ಸ್ವಾಮಿಗೆ ಬೆಳ್ಳಿಯ ದೀಪಗಳ ಕಾಣಿಕೆ

ಪ್ರಮುಖ ಕೈಗಾರಿಕೋದ್ಯಮಿಗಳಾದ ಶ್ರೀ ಬಿ ಎಂ ಖೈತಾನ್ ಅವರು ತಿರುಮಲೆಯ ಸ್ವಾಮಿಗೆ ಒಂದೂವರೆ ಲಕ್ಷ ರೂಗಳ ಬೆಲೆಯ

ಇಪ್ಪತ್ತು ಕಿಲೋಗ್ರಾಂ ತೂಕದ ಎರಡು ರಜತ ದೀಪದ ಕಂಭಗಳನ್ನು ಕಾಣಿಕೆಯಾಗಿ ನೀಡಿದ್ದಾರೆ ವಿಶಾಖಪಟ್ಟಣದ ಬಂದರು ಟ್ರಸ್ಟಿನ ನಿರ್ದೇಶಕರಾದ ಶ್ರೀ ಪಿ ವಿ ಆರ್ ಕೆ ಪ್ರಸಾದ್ ಅವರೂ ಹಾಜರಿದ್ದ ಕಾರ್ಯಕ್ರಮದಲ್ಲಿ ತಿ ತಿ ದೇ ಕಾರ್ಯನಿರ್ವಣಾಧಿಕಾರಿ ಶ್ರೀ ಎಂ ವಿ ಎಸ್ ಪ್ರಸಾದರಿಗೆ ಈ ದೀಪದ ಕಂಭಗಳನ್ನು ನೀಡಲಾಯಿತು

## ವಿದ್ಯಾರ್ಥಿಗಳಿಗೆ ಹಿತವಚನ

ದೇಶ ಸಮಗ್ರತೆಗೆ ಅಭಿವೃದ್ಧಿಗೆ ವಿದ್ಯಾರ್ಥಿಗಳೇ ಮುಖ್ಯ ಕಾರಣರೆಂದೂ ಯುವಕರ ವಿದ್ಯಾರ್ಥಿಗಳ ಉತ್ಸಾಹದಿಂದಲೇ ದೇಶದ ಪ್ರಗತಿ ಸಾಧ್ಯವೆಂದೂ ಹಾಗಾಗಿ ವಿದ್ಯಾರ್ಥಿಗಳು ತಮ್ಮ ಜೀವನವನ್ನು ಸಕ್ರಮವಾಗಿ ಆದರ್ಶಪ್ರಾಯವಾಗಿ ರೂಪಿಸಿಕೊಳ್ಳುವುದು ಇಂದಿನ ತುರ್ತು ಅಗತ್ಯವೆಂದು ವಿದ್ಯಾರ್ಥಿಗಳಿಗೆ ತಿ ತಿ ದೇ ಧರ್ಮಕರ್ತರ ಮಂಡಳಿಯ ಅಧ್ಯಕ್ಷ ಶ್ರೀ ಟಿ ಸುಬ್ಬುರಾಮಿರೆಡ್ಡಿ ಅವರು ಹಿತವಚನವನ್ನು ನುಡಿದರು

ಶ್ರೀಯುತರು ತಿರುಪತಿಯ ಶ್ರೀ ವೆಂಕಟೇಶ್ವರ ಆರ್ಟ್ಸ್ ಕಲಾಶಾಲೆಯ ವಿದ್ಯಾರ್ಥಿ ಸಂಘದ ಆರಂಭೋತ್ಸವ ಸಭೆಯಲ್ಲಿ ಮುಖ್ಯ ಅತಿಥಿಯಾಗಿ ಪಾಲುಗೊಂಡು ಮಾತನಾಡುತ್ತಿದ್ದರು ಡಿಸೆಂಬರ್ ತಿಂಗಳ ವೈಕುಂಠ ಏಕಾದಶಿಯಂದು ನಡೆದ ಈ ಸಭೆಯಲ್ಲಿ ಮಾತನಾಡುತ್ತ ಅವರು ವಿದ್ಯಾರ್ಥಿಗಳು ಸಾಮಾಜಿಕ ಆರ್ಥಿಕ ಸಾಂಸ್ಕೃತಿಕ ರಂಗಗಳಲ್ಲಿ ಮುಂದುವರೆದು ಹೆಸರು ಮಾಡಬೇಕೆಂದು ಕರೆನೀಡುತ್ತ ಅವರು ಆದಷ್ಟು ಬೇಗನೆ ಎಲ್ಲ ಶಾಲೆಗಳಿಗೂ ಭೇಟಿನೀಡಿ ವಿದ್ಯಾರ್ಥಿಗಳ ಸಮಸ್ಯೆಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸುವುದಾಗಿ ತಿಳಿಸಿದರು

ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್ ಅವರು ಪಾಲುಗೊಂಡ ಸಭೆಯನ್ನು ವಿದ್ಯಾರ್ಥಿಸಂಘದ ಅಧ್ಯಕ್ಷ ಶ್ರೀ ಮುರಳೀಕೃಷ್ಣ ರೆಡ್ಡಿ ಸ್ವಾಗತಿಸಿದರು ಕಾಲೇಜಿನ ಪ್ರಾಂಶುಪಾಲ ಶ್ರೀ ಸತ್ಯನಾರಾಯಣ ಅವರು ವಿವಿಧ ರಂಗಗಳಲ್ಲಿ ಕಾಲೇಜಿನ ಪ್ರಗತಿಯನ್ನು ವಿವರಿಸಿ ಕಾಲೇಜಿನ ಸ್ಥಿತಿಗತಿಗಳನ್ನು ಸಭೆಗೆ ತಿಳಿಸಿದರು ವಿದ್ಯಾರ್ಥಿಸಂಘದ ಕಾರ್ಯದರ್ಶಿ ಸುರೇಂದ್ರ ಕುಮಾರರೆಡ್ಡಿ ಅವರು ವಂದನೆ ಸಲ್ಲಿಸಿದರು

## ತಿರುಮಲೆಯಲ್ಲಿ ಮಾಜಿ ಪ್ರಧಾನಿ

ಭಾರತದ ಮಾಜಿ ಪ್ರಧಾನಿ ಶ್ರೀ ಚಂದ್ರಶೇಖರ್ ಅವರು ಡಿಸೆಂಬರ್ 2ರಂದು ಸೋಮವಾರ ರಾತ್ರಿ ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು ಸಂಜೆ ಆರುಗಂಟೆಯ ಹೊತ್ತಿಗೆ ತಿರುಮಲೆಯನ್ನು ಸೇರಿದ ಅವರನ್ನು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್ ಸಂಯುಕ್ತ ಕಾರ್ಯನಿರ್ವಣಾಧಿಕಾರಿ ಶ್ರೀ ಜನಾರ್ಧನನಾಯುಡು ಮೊದಲಾದವರು ಸ್ವಾಗತಿಸಿದರು ಮಾಜಿ ಕೇಂದ್ರ ಮಂತ್ರಿ ಕಮಲ್ ಮೊರಾರ್ಕಾ ಅವರೊಂದಿಗೆ ಶ್ರೀ ಚಂದ್ರಶೇಖರರು ಬೇಲಾ ಕುಟೀರದಲ್ಲಿ ವಿಶ್ರಾಂತಿ ಪಡೆದು ಸ್ವಾಮಿಯನ್ನು 25 ರೂಗಳ ವಿಶೇಷ ಪ್ರವೇಶದ ಸಾಲಿನಲ್ಲಿ ನಡೆದು ಸಂದರ್ಶಿಸಿದರು ಮಾಜಿ ಪ್ರಧಾನ ಮಂತ್ರಿಗಳಿಗೆ ರಂಗನಾಯಕ ಮಂಟಪದಲ್ಲಿ ವೇದಾಶೀರ್ವಾದ ನೀಡಲಾಯಿತು ಸ್ವಾಮಿ ಪ್ರಸಾದಗಳನ್ನೂ ನೀಡಲಾಯಿತು ಅಂದು ರಾತ್ರಿ ಶ್ರೀನಿವಾಸ ನಿಲಯದಲ್ಲಿ ತಂಗಿದ್ದ ಅವರು ಮಂಗಳವಾರ ಬೆಳಗ್ಗೆ ಸ್ವಾಮಿಯನ್ನು ಮತ್ತೆ ದರ್ಶನ ಮಾಡಿಕೊಂಡು ತಿರುಮಲೆಯನ್ನು ಬಿಟ್ಟು ಮದರಾಸಿನತ್ತ ಪ್ರಯಾಣ ಬೆಳೆಸಿದರು

## ಜನವರಿ 1 ರಂದು ತಿರುಮಲೆಯಲ್ಲಿನ ಏರ್ಪಾಡುಗಳು

ಹೊಸವರ್ಷದ ಆರಂಭದಿನದಂದು ತಿರುಮಲೆಗೆ ಆಗಮಿಸುವ ಭಕ್ತರಿಗಾಗಿ ಭಾರೀ ಪ್ರಮಾಣದ ಏರ್ಪಾಡುಗಳು ನಡೆದಿವೆ ಡಿಸೆಂಬರ್ 31 ರಿಂದ ಜನವರಿ 2ರವರೆಗೆ ಕಲ್ಯಾಣೋತ್ಸವ ಬ್ರಹ್ಮೋತ್ಸವ ಊಂಜಲ್‌ಸೇವೆ ಮೊದಲಾದ ಆರ್ಜಿತಸೇವೆಗಳನ್ನು ಮನ್ನಾ ಮಾಡಲಾಗಿದ್ದು ಜನವರಿ1 ರಂದು ಬೆಳಗ್ಗೆ 3 ಗಂಟೆಯಿಂದ ಸ್ವಾಮಿದರ್ಶನದ ವ್ಯವಸ್ಥೆಯಾಗಿದೆ ಕ್ಯೂ ಕಾಂಪ್ಲೆಕ್ಸ್‌ಗೆ ಶೇಷಾದ್ರಿನಗರದ ಉಪವಿಚಾರಣಾಕಚೇರಿಯಿಂದ ಸರದಿಯ ಸಾಲು ನಡೆಯುತ್ತದೆ 25 ರೂಗಳ ಪ್ರತ್ಯೇಕ ಪ್ರವೇಶ ಹಳೆಯ ಕ್ಯೂ ಷೆಡ್‌ಗಳ ಮೂಲಕವಿದ್ದು ಇಲ್ಲಿಗೆ ವರಾಹಸ್ವಾಮಿ ಆಲಯದ ಬಳಿಯಿಂದ ಒಳಸೇರುವ ವ್ಯವಸ್ಥೆಯಾಗಿದೆ ಈ ದಿನಗಳಲ್ಲಿ ವಸತಿ ಸೌಕರ್ಯದ ಕಾಯ್ದಿರಿಸುವಿಕೆಯನ್ನು ರದ್ದುಗೊಳಿಸಿ ಮೊದಲು ಬಂದವರಿಗೆ ಮೊದಲು ಸೂತ್ರದನ್ವಯ ವಸತಿ ನೀಡಲಾಗುವುದು ವಿವಿಧೆಡೆಗಳಲ್ಲಿ ಪ್ರಸಾದ ಮಾರಾಟದ ಕೌಂಟರುಗಳನ್ನು ತೆರೆಯಲಾಗುವುದು ಹೆಚ್ಚಿನ ಪ್ರಸಾದಗಳ ತಯಾರಿಗಾಗಿಯೂ ಸಿದ್ಧತೆಗಳು ನಡೆದಿವೆ ಯಾತ್ರಿಕರಲ್ಲಿ ಧರ್ಮಾಭಿರುಚಿಯನ್ನು ಬೆಳೆಸಲು ತಿ ತಿ ದೇ ಗ್ರಂಥಗಳನ್ನು ವಿಶೇಷ ರಿಯಾಯಿತಿದರದಲ್ಲಿ ಮಾರಾಟ ಮಾಡಲು ಹಲವು ಕಡೆ ಪುಸ್ತಕ ಪ್ರದರ್ಶನ ವಿಕ್ರಯಶಾಲೆಗಳನ್ನು ಏರ್ಪಡಿಸಲಾಗಿದೆ ಹಲವಾರು ಕಡೆ ಸಲಹಾ ಕೇಂದ್ರಗಳನ್ನು ತೆರೆಯಲಾಗುವುದು ವೈದ್ಯ ಸೌಲಭ್ಯ ಸರತಿಯ ಸಾಲಿನಲ್ಲಿ ಉಪಹಾರಸೌಲಭ್ಯ, ಪಾದರಕ್ಷೆಗಳಿಗಾಗಿ ಹೊಸ ಹೆಚ್ಚಿನ ಭದ್ರತಾಕೇಂದ್ರಗಳು ವಾಹನ ನಿಲುಗಡೆಗಾಗಿ ವಿಶೇಷ ಸ್ಥಳಗಳು, ವಾಹನ ಸಾರಿಗೆಗಾಗಿ ಏಕಮುಖ ಸಂಚಾರ ವ್ಯವಸ್ಥೆಗಳನ್ನುಂಟುಮಾಡಲಾಗಿದೆ

***

# ಮುಂದಿನ ಸಂಚಿಕೆಯಲ್ಲಿ

**ಸಪ್ತಗಿರಿ – ಫೆಬ್ರವರಿ 1992**

**ದಾಸೋಹ**
-ವಸಂತ ಕುಷ್ಟಗಿ

**ಮಹಾಶಿವರಾತ್ರಿ**
-ವಿದ್ವಾನ್ ವಿ ಎಸ್ ಭಟ್ಟ

**ಶ್ರದ್ಧೆ**
-ಮತ್ತೀಕೆರೆ ಅನಂತು

**ಭೃಗುಮಹರ್ಷಿ**
-ಕೆ ಕೇಶವನ್

**ತ್ಯಾಗರಾಜರು ಕಂಡ ಶಿವ ಮತ್ತು ದೇವಿ**
-ಡಾ|| ವಿ ಎಸ್ ಸಂಪತ್ಕುಮಾರಾಚಾರ್ಯ

**ಜೊತೆಗೆ ಕಿಶೋರ ಜಗತ್ ಗೃಹಲಕ್ಷ್ಮಿ ಇತ್ಯಾದಿ ಸ್ಥಿರ ಶೀರ್ಷಿಕೆಗಳು**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ** ಬೆಲೆ ರೂ 1-00 ಮಾತ್ರ

ವಿಶೇಷ ಸೂಚನೆ ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ ವಾರ್ಷಿಕ ಚಂದಾ ರೂ 12-00 ಮಾತ್ರ ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದದಲ್ಲೂ ಬರೆಯಬೇಕು

ಸಂಪಾದಕರು
ತಿ ತಿ ದೇ ತಿರುಪತಿ

## ಮನವಿ

ಕಾರಣಾಂತರಗಳಿಂದ ಸಪ್ತಗಿರಿ ಸಕಾಲದಲ್ಲಿ ಬಿಡುಗಡೆಯಾಗುತ್ತಿಲ್ಲ ಮುಂದಿನ ಸಂಚಿಕೆಗಳನ್ನು ಶೀಘ್ರದಲ್ಲಿ ಬಿಡುಗಡೆ ಮಾಡಲಾಗುತ್ತದೆ ಓದುಗರು ಏಜಂಟರು ಸಹಕರಿಸಬೇಕೆಂದು ವಿನಂತಿ

-ಸಂಪಾದಕರು

# ತಿಂಗಳಿನ ಮುಖ್ಯದಿನಗಳು

**ಫೆಬ್ರವರಿ 1992**

10 ಸೋಮವಾರ ರಥಸಪ್ತಮಿ
14 ಶುಕ್ರವಾರ ತಿರುಪತಿ ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವಾರಂಭ
18 ಮಂಗಳವಾರ ತಿರುಪತಿ ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವ ಸಮಾಪ್ತಿ, ಕುಮಾರಧಾರಾ ತೀರ್ಥ ಮುಕ್ಕೋಟಿ
22 ಶನಿವಾರ ಶ್ರೀನಿವಾಸಮಂಗಾಪುರದಲ್ಲಿ ಬ್ರಹ್ಮೋತ್ಸವ ಅಂಕುರಾರ್ಪಣೆ
27 ಗುರುವಾರ ಶ್ರೀನಿವಾಸ ಮಂಗಾಪುರದಲ್ಲಿ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವದಲ್ಲಿ ಗರುಡೋತ್ಸವ
29 ಶನಿವಾರ ತಿರುಪತಿಯ ಕಪಿಲತೀರ್ಥದಲ್ಲಿ ಶ್ರೀ ಕಪಿಲೇಶ್ವರಸ್ವಾಮಿ ಬ್ರಹ್ಮೋತ್ಸವ ಅಂಕುರಾರ್ಪಣೆ

# ಸಪ್ತಗಿರಿ

ಬರಹಗಾರರಿಗೆ ಸೂಚನೆ

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು

೧) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು **ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ**

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ

೬) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು

ಮಿಕ್ಕ ವಿವರಗಳಿಗೆ

ಸಂಪಾದಕರು
**ಸಪ್ತಗಿರಿ**
ತಿ ತಿ ದೇವಸ್ಥಾನ ತಿರುಪತಿ ೫೧೭೫೦೭
ಚಿತ್ತೂರು ಜಿಲ್ಲೆ ಆಂ ಪ್ರ

Edited and Published on behalf of the T T Devasthanams by K. Subba Rao M A and printed at T T D Press by M Vijayakumar Reddy Manager T T D Press Tirupati 517 507

